## ಪರಿವಿಡಿ

ಕೋಷ್ಟಕಗಳು



ಭೂಪಟ

# ೧

## ಪ್ರವೇಶ

ಸಂಸ್ಕೃತಿ ಎಂಬುದು ಮಾನವ ಸಮಾಜದಲ್ಲಿ ಒಂದು ಸೂಕ್ಷ್ಮವಾದ ವಿಚಾರವಾಗಿದೆ. ಏಕೆಂದರೆ ಸಾಂಸ್ಕೃತಿಕವಾಗಿ ಸಮಾಜದಲ್ಲಿ ಎಲ್ಲರಿಗೂ ಸಮಾನಾವಕಾಶವಿರಬೇಕೆಂಬುದು ಸಾಮಾಜಿಕ ನ್ಯಾಯದ ದೃಷ್ಟಿಯಲ್ಲಿ ಅಪೇಕ್ಷಣೀಯವಾದದು. ಚರಿತ್ರೆಯುದ್ದಕ್ಕೂ ನಾವು ನಮ್ಮ ಸಾಂಸ್ಕೃತಿಕ ವಿಷಯಗಳನ್ನು ಗಮನಿಸಿದಾಗ ಒಂದು ವರ್ಗ ಸುಖಭೋಗದಲ್ಲಿ ಜೀವನ ನಡೆಸಿದರೆ, ಮತ್ತೊಂದು ವರ್ಗ ಜೀವನಕ್ಕೆ ಬೇಕಾಗುವ ಪ್ರಾಥಮಿಕ ಸೌಕರ್ಯಗಳಿಂದಲೂ ವಂಚಿತರಾಗುವುದು ಕಣ್ಮುಂದೆ ಇರುವ ಸತ್ಯದ ವಸ್ತುವೆ. ಈ ಜನರಲ್ಲಿ ಅಸಮಾನತೆ ಏಕಿದೆ, ಅದರ ಕಾರಣಗಳೇನು, ಅದನ್ನು ಕಡಿಮೆ ಮಾಡಬಹುದೋ ಅಥವಾ ಸಂಪೂರ್ಣ ನಿರ್ಮೂಲನೆಗೊಳಿಸಬಹುದೋ ಅಥವಾ ಸಮಾಜದಲ್ಲಿ ಇದು ಅನಿವಾರ್ಯ ಅಥವಾ ಅವಶ್ಯಕವೆಂದು ಒಪ್ಪಿಕೊಳ್ಳಬೇಕೋ ಎಂಬ ಪ್ರಶ್ನೆಗಳು ಪ್ರತಿಯೊಬ್ಬ ಪ್ರಜ್ಞಾವಂತರನ್ನು ಕಾಡದೆ ಇರದು. ಹಿಂದಿನಿಂದಲೂ ದಾರ್ಶನಿಕರು ಹಾಗೂ ಸಾಮಾಜಿಕ ಚಿಂತಕರು ಚಿಂತನೆ ಮಾಡಿದ್ದಾರೆ. ಮಾಡುತ್ತಿದ್ದಾರೆ.ಆದರೆ, ಇಂದಿಗೂ ಅಲೆಮಾರಿ ಸಮುದಾಯಗಳು ಒಂದು ಕಡೆ ನೆಲೆಯೂರಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದೆ ಬರಲು ಸಾಧ್ಯವಾಗುವುದಿಲ್ಲವೆಂದರೆ ಆಳುವ ವರ್ಗಗಳಿಂದ ಎಷ್ಟೊಂದು ನಿರ್ಲಕ್ಷಕ್ಕೆ ಒಳಗಾಗಿವೆ ಎಂಬುದು ತಿಳಿದು ಬರುತ್ತದೆ. ಕೊರಮ ಸಮುದಾಯವು ಮೂಲತಃ ಅಲೆಮಾರಿಯಾಗಿದ್ದು ಕಾಡು-ಮೇಡುಗಳನ್ನು ಆಶ್ರಯಿಸಿ, ತಮ್ಮ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳುತ್ತಾ ತಮ್ಮ ಮೂಲದ ಆಚಾರ-ವಿಚಾರ, ಭಾಷೆ, ವೇಷ, ನಂಬಿಕೆ ಮತ್ತು ಅವುಗಳ ಆಚರಣೆಗಳನ್ನು ಬಿಡದೆ ಉಳಿಸಿಕೊಂಡು ಬಂದಿದ್ದಾರೆ. ತಮ್ಮ ಬದುಕಿಗಾಗಿ ಕಾಡುತ್ಪನಗಳನ್ನೆ ಅವಲಂಬಿಸಿ ಈಚಲು ಮತ್ತು ಬಿದಿರುಗಳನ್ನು ಉಪಯೋಗಿಸಿ ಹಳ್ಳಿಗರಿಗೆ ಉಪಯುಕ್ತವಾಗಬಲ್ಲ ಕೃಷಿ ಸಂಬಂಧಿ ಇಲ್ಲವೆ ಗೃಹೋಪಯೋಗಿ ಉಪಕರಣಗಳನ್ನು ತಯಾರಿಸಿ ಕಾಡಿನಿಂದ ನಾಡಿಗೆ ಬಂದು ಹಳ್ಳಿಗಳಲ್ಲಿ ಅವುಗಳನ್ನು ದವಸ-ಧಾನ್ಯಗಳಿಗೆ ಮಾರಾಟ ಮಾಡುತ್ತಾರೆ. ಸ್ವಾವಲಂಬಿಗಳಾದ ಇವರು ಕಾಡಿನಲ್ಲಿದ್ದರೂ ನಿರಂತರವಾಗಿ ನಾಡಿನ ಜೊತೆ ಸಂಪರ್ಕವಿಟ್ಟುಕೊಂಡು ಕಾಡಿನಿಂದ ನಾಡಿಗೆ, ನಾಡಿನಿಂದ ಕಾಡಿಗೆ ತಮ್ಮ ಜೀವನ ನಿರ್ವಹಣೆಗಾಗಿ ಅಲೆದಾಡುತ್ತ

ಕಾಡು-ನಾಡಿನ ವ್ಯತ್ಯಾಸ ಗೊತ್ತಿಲದ ಬಹುಮಟ್ಟಿಗೆ ಮುಂದಿನ ಭವಿಷ್ಯದ ಬಗ್ಗೆ ಕನಸು ಕಾಣದೆ ಅದಕ್ಕಾಗಿ ಸಂಪತ್ತನು ಕೂಡಿ ಹಾಕದೆ ಅಂದಿನ ಜೀವನಕ್ಕಾಗಿ ಹೆಚ್ಚು ಶ್ರಮವಹಿಸುವ ಅಲ್ಪ ತೃಪ್ತ ಜನರಿವರು. ತುತ್ತಿನ ಚೀಲ ತುಂಬಿಸಿಕೊಳ್ಳಲು ಅನೇಕ ರೀತಿಯ ಉದ್ಯೋಗಗಳನ್ನು ಅನುಸರಿಸುತ್ತಾ ವೃತ್ತಿ ನೈಪುಣ್ಯತೆಯನ್ನು ಮೆರೆಯುತ್ತಾ ಪಾರಂಪಾರಿಕ ಜ್ಞಾನವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅನೇಕ ಶತಮಾನ ಗಳಿಂದಲೂ ಬೆಟ್ಟ-ಗುಡ್ಡಗಳ ಪ್ರದೇಶಗಳಲ್ಲಿ ವಾಸವಾಗಿರುತ್ತ, ನಗರದ ಜೀವನಕ್ಕೆ ಹಾಗೂ ಗ್ರಾಮೀಣ ಸಂಸ್ಕೃತಿಗಳ ಪ್ರಭಾವಕ್ಕೆ ಸಿಲುಕಿಕೊಂಡರೂ ತಮ್ಮದೆ ಆದ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಕಾಣಬಹುದಾಗಿದೆ.

## ಇದುವರೆಗಿನ ಅಧ್ಯಯನಗಳು

ಭಾರತೀಯ ಜಾತಿ ಮತ್ತು ಬುಡುಕಟ್ಟುಗಳನ್ನು ಕುರಿತು ಬಹಳಷ್ಟು ಅಧ್ಯಯನಗಳು ನಡೆದಿವೆ. ಈ ಹಿಂದೆ ನಡೆದ ಅಧ್ಯಯನಗಳು ಕೊರಮ ಸಮುದಾಯದ ಆಚಾರ ವಿಚಾರ, ಉದ್ಯೋಗ, ವ್ಯಾಪಾರ, ಅವರ ಮೂಲ, ಮಾತನಾಡುವ ಭಾಷೆ, ಜೀವನ ಶೈಲಿ ಮುಂತಾದ ಹಲವಾರು ವಿಚಾರಗಳನ್ನು ತಿಳಿಸುತ್ತವೆ. ಈ ದೃಷ್ಟಿಯಿಂದ ಈ ಅಧ್ಯಯನಗಳು ಮಹತ್ವದ ಸ್ಥಾನವನ್ನು ಪಡೆದಿವೆ. ಇಲ್ಲಿ ಅಂತಹ ಅಧ್ಯಯನಗಳನ್ನು ಅವಲೋಕಿಸುವ ಸಣ್ಣ ಪ್ರಯತ್ನವನ್ನು ಮಾಡಲಾಗಿದೆ.

ಎಡ್ಗರ್ ಥರ್ಸ್ಟನ್ ಅವರ ಕಾಸ್ಟ್ ಅಂಡ್ ಟ್ರೈಬ್ಸ್ ಇನ್ ಸದರ್ನ್ ಇಂಡಿಯಾದಲ್ಲಿ ಕೊರವರು ರಾಜ ರಾಣಿಯರಿಗೆ ಕಣಿ ಹೇಳುತ್ತಿದ್ದ ವಿಷಯವನ್ನು ತಿಳಿಸಿದ್ದಾರೆ. ಅದರಲ್ಲಿ ಕೊರವ ಹೆಂಗಸರು ಕಣಿ ಹೇಳುವಾಗ ಹಾಡುವ ಹಾಡುಗಳನ್ನು ಸಂಕ್ಷಿಪ್ತವಾಗಿ ನೀಡಿದ್ದಾರೆ. ಆದರೆ ಕಾಲಾಂತರದಲ್ಲಿ ಇವರು ಸಾಮಾನ್ಯರಿಗೂ ಕಣಿ ಹೇಳಲಾರಂಭಿಸಿದರು ಎಂದು ತಿಳಿಸುತ್ತಾರೆ.

ನಂಜುಂಡಯ್ಯ ಎಚ್ ವಿ ಮತ್ತು ಅನಂತಕೃಷ್ಣ ಐಯ್ಯರ್ ಎಲ್ ಕೆ ಅವರುಗಳು ಕೊರಮರ ಕುರಿತು ಕೊರಚರೇ ಕೊರಮರು, ಅವೆರಡೂ ಸಮುದಾಯಗಳು ಭಿನ್ನವಲ್ಲ. ಈ ಸಮುದಾಯದವರು ಬೇಟೆಗಾರರು, ಕಣಿ ಹೇಳುವವರು, ಪಶುಪಾಲಕರು, ವಸ್ತು ಸಾಗಣೆದಾರರು, ಬುಟ್ಟಿ ಹೆಣೆಯುವವರು ಜೊತೆಗೆ ಕಳ್ಳತನ ಮಾಡುವವರಾಗಿದ್ದರು ಎಂಬುದನ್ನು ತಿಳಿಸಿದ್ದಾರೆ.

ಯೂರೋಪಿನ ಜಿಪ್ಸಿ ಜನಾಂಗವನ್ನು ಹೋಲುವ ಕೊರಮ ಬುಡಕಟ್ಟಿನ ಹೆಣ್ಣು ಮಕ್ಕಳು ಹಚ್ಚೆ ಹಾಕುವುದರಲ್ಲಿ ತುಂಬಾ ನೈಪುಣ್ಯತೆ ಪಡೆದವರು, ಕಣಿ ಹೇಳುವುದರಲ್ಲಿ, ಕಳ್ಳತನ ಮಾಡುವುದರಲ್ಲಿ, ಮನೆಗಳಿಗೆ ಕನ್ನ ಹಾಕಿ ದರೋಡೆ ಮಾಡುವುದರಲ್ಲಿ ತುಂಬಾ ಪ್ರಾವೀಣ್ಯತೆ ಪಡೆದವರಾಗಿದ್ದರು ಎಂದು ಅಬ್ಬೆ ದುಬೆಯವರು ತಿಳಿಸುತ್ತಾರೆ. ರೈಸ್‌ರವರು ಕೊರಗ, ಕೊರಮ, ಕೊರಚರು ಒಂದೇ ಸಮುದಾಯದವರು ಎಂದು ತಿಳಿಸುತ್ತಾರೆ.

ತಮಿಳು ನಾಡಿನ ಎಲ್ಲ ಕಡೆಯೂ ಕುರುವರು ಗುಡ್ಡಗಾಡು ಬುಡಕಟ್ಟಿನವರಾಗಿ ಕಂಡುಬರುತ್ತಾರೆ. ಇವರು ತಮಿಳು ಮೂಲದವರಾಗಿದ್ದು ಪಶುಪಾಲನೆ,' ಬುಟ್ಟಿ ಹೆಣೆಯುವುದು, ಬೇಟೆಯಾಡುವದು ಮಾಡುತ್ತಾರೆ.

ಸಯ್ಯಾದ್ ಸಿರಾಜ್ ಉಲ್ ಹಸನ್‌ರವರು ದ ಕಾಸ್ಟ್ ಅಂಡ್ ಟ್ರೈಬ್ಸ್ ಎನ್ನುವ ಕೃತಿಯಲ್ಲಿ ಎರಕುಲ(ಕೊರಮ)ಸಮುದಯದ ಕುರಿತು ತಿಳಿಸುತ್ತ ಅವರು ಅಲೆಮಾರಿ (ಜಿಪ್ಸಿ)ಬುಡಕಟ್ಟಿಗೆ ಸೇರಿದವರು, ವೃತ್ತಿನಿರತ ಅಪರಾಧಿ ಬುಡಕಟ್ಟು, ಬುಟ್ಟಿ ಹಾಗು ಚಾಪೆ ತಯಾರಕರು, ದಿನಗೂಲಿಗಳಾಗಿ ಕಾರ್ಯ ನಿರ್ವಹಿಸುತ್ತಾರೆ, ಸಂಗೀತ ನುಡಿಸುವ ಕಾಯಕವನ್ನು ಮಾಡುತ್ತಾರೆ. ಇವರ ಹೆಣ್ಣುಮಕ್ಕಳು ಹಳ್ಳಿಯಿಂದ ಹಳ್ಳಿಗೆ ಹೋಗಿ ಕಣಿ ಹೇಳುವುದು, ಹಚ್ಚೆ ಹಾಕುವ ಕಾಯಕವನ್ನು ಮಾಡುತ್ತಾರೆ, ಬೇರೆ ಬೇರೆ ಪ್ರದೇಶ ಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಇವರನ್ನು ಕರೆಯಲಾಗುತ್ತದೆ ಎನ್ನುತ್ತಾರೆ. ಹಾಗೇ ಇವರಲ್ಲಿ ಪ್ರಚಲಿತವಿರುವ ಬೆಡಗುಗಳ ಕುರಿತೂ ಸಹ ತಿಳಿಸುತ್ತಾರೆ.

ಕೆ ಎಸ್ ಸಿಂಗ್‌ರವರ ಪೀಪಲ್ ಅಫ್ ಇಂಡಿಯಾದ ಇಂಡಿಯನ್ ಕಮ್ಯುನಿಟೀಸ್ ಎನ್ನುವ ಕೃತಿಯಲ್ಲಿ ಕೊರವ ಸಮುದಾಯದ ಕುರಿತು ತಿಳಿಸುತ್ತಾ ಅವರನ್ನು ಬಜಂತ್ರಿ ಯಂದು ಧಾರವಾಡ, ಬೆಳಗಾವಿ ಜಿಲ್ಲೆಗಳಲ್ಲಿ ಗುರುತಿಸಲಾಗುತ್ತದೆ, ಸಾತ್ಪಡೆ, ಕಾವಾಡೆ ಎನ್ನುವ ಬೆಡಗುಗಳಿವೆ, ಕನ್ನಡ ಹಾಗು ತೆಲುಗು ಭಾಷೆಯನ್ನು ಮಾತನಾಡುತ್ತಾರೆ, ಸಂಪ್ರದಾಯಿಕವಾಗಿ ಬಾರಿಗೆ ತಯಾರಿಸುತ್ತಾರೆ, ಇವರಲ್ಲಿ ದಿನಗೂಲಿಗಳಿದ್ದಾರೆ, ಬಾಲ ಕಾರ್ಮಿಕರು ಕಂಡು ಬರುತ್ತಾರೆ, ಹಿಂದು ಸಂಪ್ರದಾಯದ ಕುರಿತು ನಂಬಿಕೆಯುಳ್ಳವ ರಾಗಿದ್ದಾರೆ. ಹನುಮಂತ, ಕೊರವ್ವ, ದ್ಯಾಮವ್ವ, ದುರುಗಮ್ಮ, ಎಲ್ಲಮ್ಮ ಮುಂತಾದ ದೇವರುಗಳನ್ನು ಆರಾಧಿಸುವರು ಎಂಬ ಮುಂತಾದ ವಿಚಾರಗಳು ತಿಳಿಸುತ್ತಾರೆ.

ಲೂಯಿಸ್ ಎ ಎ ಡಿ ಯವರ ಟ್ರೈಬ್ಸ್ ಆಫ್ ಮೈಸೂರ್ ಕೃತಿಯಲ್ಲಿ ಕೊರಮರ ಕುರಿತ ವಿವರಣೆ ಇದೆ. ಕೊರಮರನ್ನು ಕೊರಚ, ಕೊರವ ಎಂದು ಬೇರೆ ಬೇರೆ ಕಡೆ ಕರೆಯಲಾಗುತ್ತದೆ, ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ಇವರು ಹಕ್ಕಿ ಪಿಕ್ಕಿಗಳಿಗೆ ಸಮಾನರು ಎನ್ನುತ್ತಾರೆ, ತಳಜಾತಿಗೆ ಸೇರಿದವರು,ಅಪರಾಧಿ ಬುಡಕಟ್ಟು, ತಮ್ಮ ಭಾಷೆಯೊಂದಿಗೆ ಸ್ಥಳೀಯ ಬಾಷೆಯನ್ನು ಮಾತನಾಡುತ್ತಾರೆ. ಕೇರಳ,ಮದ್ರಾಸ್,ಆಂಧ್ರಪ್ರದೇಶಗಳಲ್ಲಿ ಪರಿಶಿಷ್ಟ ವರ್ಗದ ಪಟ್ಟಿಯಲ್ಲಿಯೂ, ಮೈಸೂರು ರಾಜ್ಯದಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿಯೂ ಇವರನ್ನು ಗುರುತಿಸಲಾಗಿದೆ.

ಪಿ ಕೆ ಮಿಶ್ರ, ಸಿ ಆರ್ ರಾಜಲಕ್ಷ್ಮಿ, ಐ ವರ್ಗೆಸೆ ರವರ ನೊಮಾಡ್ಸ್ ಇನ್ ದ ಮೈಸೂರ್ ಸಿಟಿ ಎನ್ನುವ ಕೃತಿಯಲ್ಲಿ ಕೊರವರ ಕುರಿತು ತಿಳಿಸುತ್ತ ಉಪ್ಪು ಕೊರವ, ನಾಟ್ಟು ಕೊರವ(ಮೇಲ್ವಾವಣೆ ಮಾಡುವವರು) ಎನ್ನುವ ವಿಭಾಗಗಳಿರುವುದಾಗಿ ತಿಳಿ ಸುತ್ತಾರೆ, ಬಂಬನ್ನು ಬಳಸಿ ಬುಟ್ಟಿ, ಆಹಾರ ಸಂಗ್ರಹಣೆಗೆ ಬಳಸುವ ಕರಸೆ ಮುಂತಾದವು ಗಳನ್ನು ತಯಾರಿಸುವರು, ಕೊರವರಲ್ಲಿಯೇ ಕೊರವರಿಗಿಂತ ಭಿನ್ನವಾದ ಕುಂಚಿ ಅಥವಾ ಕುಂಚಿ ಕೊರವ ಎನ್ನುವ ಸಮುದಾಯವೊಂದಿದೆ ಎಂದು ತಿಳಿಸುತ್ತಾರೆ.

Mr Francis ಹೇಳಿಕೆಯು ಈ ಕೆಳಗಿನಂತಿದೆ A gipsy tribe found all over the Tamil country...Kurchvas have been treated a being the same as Yerukulas...thus donot intermarry or eat together.

ಇವರು ಪರಸ್ಪರಲ್ಲಿ ಮದುವೆ ಸಂಬಂಧಗಳು ಹಾಗೂ ಊಟ ಉಪಚಾರಗಳು ನಡೆಯುವುದಿಲ್ಲ. ಕುರುವ ಮತ್ತು ಯರಕುಲರ ಮಧ್ಯ ಸಾಂಸ್ಕೃತಿಕ ಭಿನ್ನತೆ ಇದೆ. ಆದರೆ ಇವೆರಡು ಸಮುದಾಯಗಳು ಒಂದೆ ಆಗಿದ್ದು ಪ್ರಾದೇಶಿಕವಾಗಿ ವಿಭಿನ್ನ ಹೆಸರುಗಳಿಂದ ಗುರುತಿಸಿಕೊಂಡಿದ್ದಾರೆ. ಆದರೆ ಫ್ರಾನ್ಸಿಸ್‌ರವರು ಯರಕುಲರೇ ಬೇರೆ ಕೊರಮರೇ ಬೇರೆ ಎಂದು ಹೇಳಿದ್ದಾರೆ.

Rev J Cainರವರು ಕೂಡಾ...This Name has been derived from the Telugu word Eruka. Which means knowledge or ocquaintance as they are great fortune tellers ಎಂದು ತಿಳಿಸಿದ್ದಾರೆ. ಎರುಕ ಪದವೇ, ಎರುಕುಲ ಎಂಬ ಪದಕ್ಕೆ ಮೂಲ ಎಂಬುದಾಗಿ ತಿಳಿಸಿದ್ದಾರೆ. ಈ ಮಾತಿನ ಹಿನ್ನೆಲೆಯಲ್ಲಿ ಎರುಕುಲ ಪದವು ಸೃಷ್ಟಿಯುದ್ದದ್ದೇ ತೆಲುಗುನಾಡಿನಲ್ಲಿ ಎನ್ನುವುದಾದರೆ, ತಮಿಳಿನ ಉಪಭಾಷೆಯಾಗಿರುವ ಎರಕುಲ ತಮಿಳರು ಸೃಷ್ಟಿಯಾಗಿ ಬೆಳೆದದ್ದು ಆಂಧ್ರ ಪ್ರದೇಶದಲ್ಲಿ ಎಂಬ ತಪ್ಪು ಅಭಿಪ್ರಾಯಕ್ಕೆ ಬರಬೇಕಾಗುತ್ತದೆ.

ಕನ್ನಡ ಜಾನಪದ ವಿಶ್ವಕೋಶದಲ್ಲಿ ಕೊರವರು ಎಂಬ ಭಾಗದಲ್ಲಿ ಈ ಕೆಳಗಿನ ಅಂಶಗಳನ್ನು ಕಾಣಬಹುದು. ತಮಿಳುನಾಡಿನ ಮತ್ತು ಆಂಧ್ರ ಕಡೆಯ ಕೊರಮರು ಆಡುವ ಭಾಷೆ ಒಂದೆ, ಅದೇ ಭಾಷೆಯನ್ನು ಕರ್ನಾಟಕದ ಕೊರಮರು ಆಡುತ್ತಾರೆ. ಆಂಧ್ರದಲ್ಲಿ ಇದು ಯರ್ಕುಳವಾದರೆ ಕರ್ನಾಟಕದಲ್ಲಿ ಕುಳುವ ಭಾಷೆಯಾಗಿದೆ. ಕೊರಮರು ಆಯಾ ಪ್ರಾದೇಶಿಕ ಭಾಷೆಯೊಂದಿಗೆ ವ್ಯವಹರಿಸುವುದರಿಂದ ಅವುಗಳ ಪ್ರಭಾವ ತಮ್ಮ ಭಾಷೆಯ ಮೇಲೂ ಆಗಿ ಅದು ರಾಜ್ಯದಿಂದ ರಾಜ್ಯಕ್ಕೆ ಕೆಲ ವ್ಯತ್ಯಾಸ ಪಡೆದುಕೊಳ್ಳಬಹುದು. ಅಲೆಮಾರಿ ಸಮುದಾಯಗಳಲ್ಲಿ ಒಂದು ಪಂಗಡದವರಾದ ಕೊರವಂಜಿಗಳು ಜನಪದ ಗಾಯಕರೂ ಹೌದು. ಒಂದು ಕಾಲದಲ್ಲಿ ದಕ್ಷಿಣ ಭಾರತದಲ್ಲೆಲ್ಲ ಇವರ ಹೆಸರು ಪ್ರಸಿದ್ಧವಾಗಿತ್ತು. ಕೊರಮ, ಕೊರವ ಇವು ಪುಲ್ಲಿಂಗವಾದರೆ, ಕೊರವಿ, ಕೊರಮಿ, ಕೊರಮ್ತಿ, ಕೊರವಂಜಿ ಮುಂತಾದವು ಸ್ತ್ರೀರೂಪಗಳು. ಅಂತೆಯೇ ಕೊರಮಶೆಟ್ಟಿ ಎಂಬುದು ದಕ್ಷಿಣ ಕರ್ನಾಟಕದಲ್ಲಿ ಕೊರಮರನ್ನು ಗುರುತಿಸುವ ಪುಲ್ಲಿಂಗರೂಪ. ಬಿದಿರಿನಿಂದ ಮಾಡಿದ ಕುಕ್ಕೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗಿ ಮಾರುತ್ತಿದ್ದುದರಿಂದ ಆ ಭಾಗದ ಜನರ ಬಾಯಲ್ಲಿ ಕೊರಮ, ಕೊರಮಶೆಟ್ಟಿ ಎಂದಾಗಿದೆ.

ಕೊರಮರು ಬುಟ್ಟಿ ಮಾಡುವ, ಹಗ್ಗ ಮಾಡುವ, ಈಚಲ ಮರದ ಗರಿಗಳಿಂದ ಕಸಬರಿಕೆ ಮಾಡುವ, ಕಣಿ ಹೇಳುವ, ಎತ್ತುಗಳ ವ್ಯಾಪಾರ ಮಾಡುವ ಹೀಗೆ ಅನೇಕ ವೃತ್ತಿಗಳಿಂದ ಜನಪದ ಬದುಕಿನಲ್ಲಿ ಒಂದಾದರು ಇವರ ಮೂಲ ನೆಲೆ, ಭಾಷೆ,

ಜೀವನ ವಿಧಾನ ಮುಂತಾದವುಗಳನ್ನು ನೋಡಿದರೆ ಇದೊಂದು ಪ್ರತ್ಯೇಕ ಜೆಪ್ಸಿ ರೀತಿಯ ಬುಡಕಟ್ಟು ಎಂಬುದು ಅರಿವಿಗೆ ಬರುತ್ತದೆ.

ಬಿ ಪಿ ರಾಮಯ್ಯ ನವರು ಕೊರಗರು ಪರಂಪರಾಗತ ಅಸ್ಪೃಶ್ಯತೆಗೆ ಒಳಗಾದವರು, ಆದರೆ ಕೊರಮರು ಐತಿಹಾಸಿಕವಾಗಿ ಅಸ್ಪೃಶ್ಯತೆಗೆ ಒಳಗಾಗಿಲ್ಲ ಎಂದು ಹೇಳಿದ್ದಾರೆ. ಕೊರಮರು ಕೊರಗರಷ್ಟು ಅಸ್ಪೃಶ್ಯತೆಗೆ ಒಳಗಾಗಿಲ್ಲವೆನ್ನುವುದು ನಿಜ. ಆದರೆ ಪರಂಪರಾನು ಗತವಾಗಿ, ಐತಿಹಾಸಿಕವಾಗಿ ಅಸ್ಪೃಶ್ಯರೇ ಅಲ್ಲ ಎಂದು ಹೇಳಿರುವುದು ಸಮಂಜಸ ಅಲ್ಲ. ಅಂಬೇಡ್ಕರ್ ಅವರ ಅಸ್ಪೃಶ್ಯರು ಕೃತಿಯಲ್ಲಿಯೇ ಕೊರಮ ಸಮುದಾಯವೂ ಅಸ್ಪೃಶ್ಯತೆಗೆ ಒಳಗಾದ ಸಮುದಾಯವೆಂದು ಗುರುತಿಸಿದ್ದಾರೆ. ಕೊರಮರು ಜಾತಿಯಿಂದ ಅಲ್ಪಸಂಖ್ಯಾತರಾಗಿರುವ ಇವರನ್ನು ಜನರು ಅಷ್ಟೊಂದು ಗಮನಹರಿಸುವುದಿಲ್ಲ. ಕೊರಮರು ಐತಿಹಾಸಿಕವಾಗಿ ಅಸ್ಪೃಶ್ಯರಲ್ಲ ಎಂದು ಹೇಳಿರುವುದು ಯಾವ ದೃಷ್ಟಿಕೋನ ದಿಂದ ಎನ್ನುವುದು ಪ್ರಶ್ನಾರ್ಹ. ಅಂಬೇಡ್ಕರ ಅವರ ಅಸ್ಪೃಶ್ಯರು ಕೃತಿಯಲ್ಲಿ ಪು.೧೮೮ರಲ್ಲಿ ಕೇಂದ್ರ ಬ್ರಿಟಿಷ್ ಸರ್ಕಾರವು ಮದರಾಸು ರಾಜ್ಯದ ಪರಂಪರಾಗತವಾಗಿರುವ ಅಸ್ಪೃಶ್ಯರ ಪಟ್ಟಿಯೊಂದನ್ನು ಕೊಟ್ಟಿದ್ದಾರೆ. ಅದರಲ್ಲಿ ಕುರುವನ್, ಕೊರಮ ಅಸ್ಪೃಶ್ಯರ ಪಟ್ಟಿಯಲ್ಲಿ ಗುರುತಿಸಲಾಗಿದೆ.

ಥರ್ಸಟನ್ ಅವರು ಬೆಡಗುಗಳನ್ನು ಸರಿಯಾಗಿ ಗುರುತಿಸದೆ ಇರುವುದು ಇಲ್ಲಿ ಕಂಡುಬರುತ್ತದೆ. ಆಂಧ್ರ ಪ್ರದೇಶ, ತಮಿಳುನಾಡು, ಮಹಾರಾಷ್ಟ್ರದ ಉತ್ತರ ಕರ್ನಾಟಕದಲ್ಲಿ ಮುಖ್ಯವಾಗಿ ೧. ಸಾತ್ಪಾಡಿ ೨. ಕಾವಾಡಿ ಎಂಬ ಎರಡು ಪ್ರಮುಖ ಬೇಡಗುಗಳಿದ್ದು, ಉಳಿದವು ಉಪಬೇಡಗುಗಳಾಗಿವೆ. ಕೊಡುಕೊಳ್ಳುವಿಕೆಗೆ ಸಾತ್ಪಡಿ ಮತ್ತು ಕಾವಾಡಿ ಬೆಡಗುಗಳನ್ನು ಮಾತ್ರ ಬಳಕೆಯಲ್ಲಿವೆ. ಆದರೆ ಮೈಸೂರು, ಬೆಂಗಳೂರು, ಮಂಡ್ಯ ಈ ಜಿಲ್ಲೆಗಳಲ್ಲಿ ನಾಲ್ಕು ಬೇಡಗುಗಳು ಯಾರು ಯಾವ ಬೆಡಗಿನ ಜೊತೆಗಾದರೂ ಸಂಬಂಧ ಬೆಳೆಸಲು ಅವಕಾಶವಿರುವುದು ಕಂಡುಬರುತ್ತದೆ. ಆದರೆ ಇಲ್ಲಿ ಥರ್ಸಟನ್ ರವರು ಹೇಳಿರುವುದು ಮೈಸೂರು ಮತ್ತು ಕೆಲವು ಜಿಲ್ಲೆಗಳಿಗೆ ಮಾತ್ರ ಸಂಬಂಧಿಸಿದ್ದು ಅದು ಕೂಡ ಸರಿಯಾಗಿ ಗುರುತಿಸದೆ ಇರುವುದು ಕಂಡುಬರುತ್ತದೆ. ಉತ್ತರ ಕರ್ನಾಟಕ ದಲ್ಲಿ ಮ್ಯಾಂಡ್ರಗುತ್ತಿ ಮತ್ತು ಸಾತ್ಪಡಿ ಬೀಗರಾದರೆ ಇದೆ ಬೆಡಗಿನವರು ಮೈಸೂರು ಪ್ರಾಂತ್ಯದಲ್ಲಿ ಅಣ್ಣ ತಮ್ಮಂದಿರರೂ ಆಗಬಹುದು, ಬೀಗರು ಆಗಬಹುದಾಗಿದೆ.

ಈ ಮೇಲಿನ ಎಲ್ಲಾ ಆಧಾರಗಳಿಂದ ಕೊರಮರಿಗೂ, ಕೊರಗರಿಗೂ ಯಾವುದೇ ಸಂಬಂಧವಿಲ್ಲವೆನ್ನುವುದು ತಿಳಿಯಬಹುದಾಗಿದೆ. ಆದರೂ ಕೆಲವು ಜನರು ಕೊರವ, ಕೊರಮ, ಕೊರಗ ಹೆಸರುಗಳಲ್ಲಿನ ಧ್ವನಿ ಸಾಮ್ಯತೆಯನ್ನು ಕೊರವ, ಕೊರಮ ಆದಂತೆ ಕೊರಗವೂ ಆಗಿರಬಹುದು ಎಂದು ತಪ್ಪಾಗಿ ಗ್ರಹಿಸಿ ಒಂದುಗೂಡಿಸಿ ಹೇಳಿದ್ದಾರೆ.

**ಕೊರಮ ಶಬ್ದದ ಔಚಿತ್ಯ :** ಕೊರಮ ಎನ್ನುವುದು ಜಾತಿ ಸೂಚಕವಾದ ಪದವಾಗಿದೆ. ಕರ್ನಾಟಕದಲ್ಲಿ ಕೊರಮರನ್ನು ಕೊರಮ, ಕೊರಮಶೆಟ್ಟಿ, ಕೋತಿ ಕೊರಮರು, ಭಜಂತ್ರಿ ಕೊರಚ, ಕೊರವ, ಕುಂಚಿ ಕೊರಮರು, ಕುರುವನ್, ಕೇಪ್‌ಮಾರಿಸ್, ವಾಜಂತ್ರಿ

ಎಂದೆಲ್ಲ ಗುರುತಿಸಿದರೆ, ಹೆಣ್ಣು ಮಕ್ಕಳನ್ನು ಕೊರವಿ, ಕೊರಮಿ, ಕೊರವಂಜಿ ಮುಂತಾದ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಹಾಗೆ ಇವರನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸುತ್ತಾರೆ. ಆದರೂ ಅವರು ಅಳವಡಿಸಕೊಂಡಿರುವ ವೃತ್ತಿಗಳಿಗನುಗುಣವಾಗಿ ಹಗ್ಗ ಮಾಡುವವರನ್ನು ಹಗ್ಗದ ಕೊರಚರು, ಎತ್ತುಗಳ ವ್ಯಾಪಾರ ಮಾಡುವವರನ್ನು ಎತ್ತಿನಕೊರಚರು, ಕೋತಿ ಆಡಿಸುವವರನ್ನು ಕೋತಿ ಕೊರಮರು, ಶಹನಾಯಿ ನುಡಿಸುವವರನ್ನು ಭಜಂತ್ರಿ, ವಾಜಂತ್ರಿ, ಕುಕ್ಕೆ ಹೆಣೆಯು ವವರನ್ನು ಕುಕ್ಕೆ ಕೊರಮರು, ವಾಲಗ ಊದುವರನ್ನು ವಾಲಗದ ಕೊರಮರು, ಉಪ್ಪು ಮಾರುವವರನ್ನು ಉಪ್ಪು ಕೊರಮರು, ಕಳ್ಳತನ, ರಸ್ತೆ ದರೋಡೆ ಮಾಡುತ್ತಿದ್ದ ವರನ್ನು ಕಳ್ಳ ಕರೊಚರು, ಬ್ಯಾರಗಾಯಿ ಕೊರಮರು, ಗಂಡಿ ಕೊರಮರು, ಹಾವು ಆಡಿಸುವವರನ್ನು ಹಾವಿನ ಕೊರಮರು ಮತ್ತು ಕೊರವರು ಎಂದು ಮುಂತಾಗಿ ಗುರುತಿಸಲಾಗುತ್ತದೆ.

ಕರ್ನಾಟಕದಲ್ಲಷ್ಟೇ ಅಲ್ಲದೆ ಬೇರೆ ಬೇರೆ ರಾಜ್ಯಗಳಲ್ಲಿ ಕೊರಮರಿಗೆ ಇರುವ ಇತರೆ ಹೆಸರುಗಳನ್ನು ವಿವಿಧ ವಿದ್ವಾಂಸರು ದಾಖಲಿಸಿರುವುದು ಈ ಕೆಳಗಿನಂತೆ ಕಾಣಬಹುದಾಗಿದೆ.

ಎಂ ಪಾಪೂರಾವ್ ಬೆಲ್ ಪ್ರೋರ್, ವಿಸ್ಸನ್, ಒಪರ್ಟ್, ಪ್ರಾನ್ಸಿಸ್ ಮತ್ತು ತಿರುಚುನಾಪಳ್ಳಿಯ ಗೆಝೆಟಿಯರ್‌ಗಳಲ್ಲಿ ಉಲ್ಲೇಖಿಸಿರುವಂತೆ ಅಗಂಬಡಿಯರ್– ವೆಲ್ಲಾಲಸ್, ಪಿಲ್ಲಿ, ಪಲ್ಲಿ, ಕರವಾಯ್, ಇಂಡಿಯನ್ ರೆಡ್ಡಿ, ಕೆಪ್ ಮಾರಿ ಕೊರವರ್, ಸೆರುಯಿಕರ್ಸ್, ಕೊರವ ಮೂಜಾರಿಸ್, ಎರುಕುಲವಂದಾಲು, ಕುಲವಂದಾಲು, ಕುಲವಾರು, ಎರಕವಾರು, ಎರಕಲವಾರು, ಕುಂಚಿಕೊರವ, ಎರಕಲವಾಡಲು,ಕುರ್ರಿವನ್ಲೊ ಕುರುವನ್, ಪಾಮುಲಚರಮರ್ಸ್, ಮುಸಲವಾಡು, ಉತಲವಾಡು, ವನ್ನಿಯನ್ಸ್, ವಾಲ್ಸನ್ ಕೊರವರ್, ಉಯ್ಯಾಲೂಕುವಾಸ್, ಭಜಂತ್ರಿ ಅಥವಾ ಸೊನಾಯಿ ಕೊರವರು, ಕೊಲ್ಲ, ಸೋಲಿ ಕೊರವಾಸ್, ಎರ್ಕಬೋಗವಾರು, ಥೆಪಿಡಿಯ ಮುಂತಾದ ಹೆಸರುಗಳನ್ನು ಥರ್ಸ್ಟನ್ ಅವರು ಉದಾಹರಿಸಿದ್ದಾರೆ.

ಕೊರವರಿಗೆ ಕೊರಚ ಅಥವಾ ಕೊರ್ಚ ಎಂದು ಕರೆಯುತ್ತಾರೆ. ಇನ್ನೂ ಕೆಲವೆಡೆ ಕುಶ್ರಿ ಎಂದು ಕರೆಯುತ್ತಾರೆ. ಇದು ಕೊರ್ಚ ಎಂಬ ಪದದಿಂದ ಬಂದಿರಬಹುದು. ಹಿಂದುಸ್ತಾನಿಯ ಕೊರಿ>ಕೊರಿನಿಗ>ಕೋರ್ಚ>ಕೊರಚ ಎಂದಾಗಿರಬೇಕು. ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೊರವ ಎಂಬ ಶಬ್ದ ಬದಲಾವಣೆ ಹೊಂದಿ ಕೊರ್ಚ ಎಂದು ಕರೆಯುತ್ತಾರೆ. ಕೊರವ ಎಂಬುದನ್ನು ಕೊರ್ಚ ಎಂಬ ಶಬ್ದದಿಂದ ಕರೆಯುವುದು ರೂಢಿಗೆ ಬಂದಿದೆ. ಈ ಕೊರ್ಚ ಪದವೇ ಮುಂದೆ ಕಾಲಾಂತರದಲ್ಲಿ ಬದಲಾವಣೆ ಹೊಂದಿ ಕೊರವ ಎಂದಾಗಿರಬೇಕು. ಥರ್ಸ್ಟನ್‌ರವರು ಕೊರಚ ಎಂಬುದು ಕೊರವ ಎಂಬುದರ ನಂತರ ಬಂದ ಜಾತಿ ವಾಚಕ ಪದವಾಗಿದೆ ಎನ್ನುತ್ತಾರೆ(ಬಸವರಾಜ ಮಲಶೆಟ್ಟಿ: ೩೩೭). ಕೊರಚ ಎಂಬುದರ ಮುಂದುವರೆದ ರೂಪ ಕೊರವ ಪದವಾಗಿದೆ.

ಕೊರಮ ಎಂಬುದು ಜಾತಿ ಸೂಚಕವಾದ ಪದ. ಕೊರವಂಜಿ ಶಬ್ದ ಪ್ರಮುಖ ದ್ರಾವಿಡ ಭಾಷೆಗಳಲ್ಲಿ ಕಂಡುಬರುತ್ತದೆ. ತಮಿಳಿನ ಪುಲ್ಲಿಂಗ ರೂಪ ಕುರವನ್ ಎಂದಾದರೆ ಕುರುತ್ತಿ, ಕುರವಿ, ಕುರವಂಚಿ(ಜಿ) ಎಂಬ ಹಲವಾರು ಸ್ತ್ರೀರೂಪಗಳಿವೆ. ಇದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಕೊರವಂಜಿ, ಕೊರವತಿ, ಕೊರವಿತಿ, ತೆಲುಗಿನಲ್ಲಿ ಕೊರವತ, ಕೊರವಂಜಿ ಮುಂತಾದ ರೂಪಗಳು ಪ್ರಯೋಗದಲ್ಲಿವೆ. ಪುಲ್ಲಿಂಗ ಮತ್ತು ಸ್ತ್ರೀಲಿಂಗ ರೂಪ ಕು ದಿಂದ ಕುರುವ, ಕೊರಮ ರೂಪುಗೊಂಡಿರಬಹುದು. ಹೀಗೆ ಇದನ್ನು ಅರ್ಥೈಸಬಹುದು. ಪುಲ್ಲಿಂಗ ರೂಪ ಕು>ಕುರ>ಕುರು>ಕುರುಣಿಗ> ಕುರುವ>ಕೊರವ> ಕೊರವನ್> ಕೊರಮ>ಕೊರಚ ಎಂದಾದರೆ ಸ್ತ್ರೀಲಿಂಗರೂಪ ಕು>ಕುರ>ಕುರು> ಕುರವಿ> –ಕೊರವಿ>ಕೊರವತ>ಕೊರವಿತಿ>ಕುರಂಜಿ>ಕೊರಮಿ>

ಕೊರವಂಚಿ> ಕೊರವಂಜಿ ಎಂದು ಕಾಲದಿಂದ ಕಾಲಕ್ಕೆ ರೂಪಾಂತರಗೊಂಡಿದೆ ಎಂಬುದು ತಿಳಿಯುತ್ತದೆ.

ರೆವರೆಂಡ ಕಿಟಲ್ಲರ ಶಬ್ದಕೋಶದಲ್ಲಿ ಕೊರಚ ಪದಕ್ಕೆ A thievish wondering hill tribe that sell worden combs....etc, ಮತ್ತು an upbrading man, a blomer, a scorner a babbler ಎಂತಲೂ, ಕೊರಚು ಪದಕ್ಕೆ to divine to babble ಎಂದೂ ಹಾಗೂ ಕೊರಚಾಡು ಪದಕ್ಕೆ to use words that reveals Secretsvulnorable points or touchy quarters" ಎಂಬ ವಿವರಣೆ ದೊರೆಯುತ್ತದೆ. (Kitter's Kannada-English dictionary Vol.II, p.521)

ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಬಾಚಣಿಕೆ ಮೊದಲಾದ ಸಾಮಾನುಗಳನ್ನು ಮಾರುತ್ತಾ, ಊರೂರು ಅಲೆಯುವ ಗುಡ್ಡಗಾಡು ಜನ ಕೊರಚರು, ಇವರಲ್ಲಿ ಬೀಡ ಕೊರಚರು, ಡಬಳೀ ಕೊರಚರು ಎಂಬ ಗುಂಪುಗಳು ಇವೆ ಎಂಬ ವಿವರಣೆ ಕಂಡುಬರುತ್ತದೆ. ಜೊತೆಗೆ ಕುರುವ ಪದಕ್ಕೆ ದಿಬ್ಬ, ಗುಡ್ಡ, ದಿಣ್ಣೆ ಎಂತಲೂ ಕುರುವ್ವ ಪದಕ್ಕೆ ನಡುಗಡ್ಡೆ, ಕುಕ್ಕೆ, ಬುಟ್ಟಿ ಎಂತಲೂ ಕುರುಚ್ಚು ಪದಕ್ಕೆ ಕುರುಚುಕಾಡು ಕುರುಚಲು ಕಾಡು, ಚಿಕ್ಕಕಾಡು ಎಂದೂ ಅರ್ಥವಿದೆ.

ದ್ರಾವಿಡಿಯನ್ ಎಟಮಲಾಜಿಕಲ್ ಡಿಕ್ಷನರಿ (ಡಿ.ಇ.ಡಿ) ನಂಬರ್ ೧೮೫೦ - Kuram Kurava tribe, palmistry as practised by Kurava women; Kuravanm man of a caste of flowers, snake - catchers, basket - makers, and fortune - tellers; fem. Kuratti, Kuravi, Kuravanci, Kuravanar, the Kurava tribe of the mountai, Kurunci, hilly trac, Kuricci village, in the hilly tract; .....Ma: Kuruvan wandering tribe of basket - makers, snake - catch - ers, and Gipsies, Kurucci hill country, ....Ka. Korava, Korama man of a now settled tribe who make baskets, mats, etc; are mujicians etc., fem. Koravanji, Koravati, Koraviti (Commonly fortune - tellers) ಮೇಲಿನ ವಿವಿಧ

ಪ್ರಯೋಗಗಳು ಕೊರವ ಸಮುದಾಯದ ಹೆಸರಿನ ಮೂಲ ಮತ್ತು ಅವರ ವೃತ್ತಿಯನ್ನು ಖಚಿತಗೊಳಿಸುತ್ತವೆ.

ವಿಲ್ಸನ್ ಮತ್ತು ಇತರರ ಪ್ರಕಾರ ಎರು ಎಂಬುದು ಎರ್ರ ಎನ್ನುವ ಪದದೊಂದಿಗೆ ಸಂಪರ್ಕ ಹೊಂದಿದೆ. ಎರ್ರ ಅಂದರೆ ಕೆಂಪು ಎಂದರ್ಥ. ತೆಲುಗಿನಲ್ಲಿ ಎರುಕಲ ವಂದಾಲು ಎಂದರೆ ಭವಿಷ್ಯ ಹೇಳುವವರು ಎಂದರ್ಥ. ಎರ್ರ ಎಂದರೆ ಕೊರಮ ಭಾಷೆಯಲ್ಲಿಯೂ ಕೆಂಪು ಎಂಬ ಅರ್ಥವೇ ಇದೆ. ಓಪರ್ಟ್ ಅವರ ಪ್ರಕಾರ ಅವರ ಮೂಲ ವೃತ್ತಿಯು ಕಣಿ(ಭವಿಷ್ಯ) ಹೇಳುವುದಾಗಿದೆ. ಕುರುವಂದಾಲು ಅಥವಾ ಕುಲುವಂದಾಲುಗಳಿಗೆ ತೆಲುಗಿನ ಜನರು ಎರುಕುಲವಂದಾಲು ಎಂದು ಕರೆಯುತ್ತಾರೆ. ಪ್ರಾಯಶಃ ಕಣಿ ಹೇಳುವ ವೃತ್ತಿಯಿಂದಲೇ ಅವರ ಜಾತಿಯ ಹೆಸರು ಬಂದಿದೆ ಎಂಬುದು ವಿಧಿತವಾಗುತ್ತದೆ. ಕರ್ನಾಟಕದ ಕೊರಮರಿಗೂ ಕೂಡ, ಕೊರಮ ಎಂಬ ಹೆಸರು ಈ ಮೇಲೆ ಹೇಳುವಂತೆ ಅವರ ಕಣಿ ಹೇಳುವ ವೃತ್ತಿಯಿಂದಲೆ ಬಂದಿರುವುದಾಗಿ ತೋರುತ್ತದೆ.

ಹಾಗೆಯೇ, ಕುರು ಶಬ್ದದ ಮೂಲ ಕು ಅಂದರೆ ಒಂದು ಪರ್ವತ. ೯ನೇ ಶತಮಾನದ ಒಂದು ತಮಿಳು ಕೃತಿಯಲ್ಲಿ ಕುರು ಅಥವಾ ಕುರ ಎನ್ನುವ ಪದ ಪರ್ವತದಲ್ಲಿನ ಒಂದು ಬುಡಕಟ್ಟು ಸಮುದಾಯ ಎಂಬ ಮಾತುಗಳನ್ನು ಹೇಳಿದ್ದಾರೆ. ಇಲ್ಲಿಯೂ ಕೂಡ ಈ ಸಮುದಾಯ ಕಣಿ ಹೇಳುವ ವೃತ್ತಿಯೊಂದಿಗೆ ಸಂಬಂಧ ಹೊಂದಿರುವುದಾಗಿ ತಿಳಿಸುತ್ತಾರೆ.

**ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ಹಿನ್ನೆಲೆ**

ಬುಡಕಟ್ಟು ಸಮುದಾಯಗಳ ಮೂಲದ ಕುರಿತು ವೈಶಿಷ್ಟ್ಯ ಹಾಗೂ ಕುತೂಹಲ ಕರವಾದ ಹಿನ್ನೆಲೆಯನ್ನೊಳಗೊಂಡ ಹಲವಾರು ಐತಿಹ್ಯಗಳೇ ಇವೆ. ಕೊರವರ ಮೂಲ ವನ್ನು ಕುರಿತು ಕೆಲವು ಪೌರಾಣಿಕ ಕಥೆಗಳು ಹುಟ್ಟಿಕೊಂಡಿವೆ. ಪ್ರಕೃತಿಯ ನಿಗೂಢತೆಗೆ ಉತ್ತರ ಸಿಗದೆ ಇದ್ದಾಗ ಆ ಎಲ್ಲವನ್ನು ದೇವರು ಮತ್ತು ಧರ್ಮದ ಹೆಸರಿನಲ್ಲಿ ನಂಬಿ ಜನ ಅದರ ನೆರಳಿನಲ್ಲಿಯೇ ಬದುಕಿದರು. ಅಂತಹ ನಿಗೂಢ ಅಂಶಗಳ ಬಗೆಗೆ ಅಪಾರವಾದಂತಹ ಭಯ, ಭಕ್ತಿ, ಗೌರವಗಳನ್ನು ಬೆಳಸಿಕೊಂಡರು. ಹುಟ್ಟು ಸಾವಿಗೆ ಬದುಕಿನ ಎಲ್ಲ ಆಗು ಹೋಗುಗಳಿಗೆ ಈ ದಿವ್ಯ ಶಕ್ತಿಯೇ ಕಾರಣವೆಂದು ನಂಬಿದರು. ಜನಪದರ ನಂಬಿಕೆಗಳೆ ಹಲವು ರೂಪದ ಕಥೆ, ಕಾವ್ಯಗಳಾಗಿ ರೂಪುಗೊಂಡಿವೆ.

ಈ ನಿಟ್ಟಿನಲ್ಲಿ ನೋಡುವುದಾರೆ ಕೊರಮ ಸಮುದಾಯದ ಮೂಲದ ಕುರಿತು ಹಲವಾರು ಐತಿಹ್ಯಗಳಿವೆ. ರಾಮಾಯಣ, ಮಹಾಭಾರತ, ಭಾಗವತ, ಮುಂತಾದ ಎಲ್ಲವುಗಳಿಗೂ ಜನಪದರು ಕೊರಮ ಸಮುದಾಯವನ್ನು ಗಂಟುಹಾಕಿದ್ದಾರೆ ಜಾತಿಯ ಹುಟ್ಟು ದೈವ ನಿರ್ಮಿತವಾದದ್ದು ಎಂದು ಅವರ ನಂಬಿಕೆಯಾಗಿರುವುದು ಹಲವಾರು ಕಥೆಗಳಲ್ಲಿ ಕಂಡುಬರುತ್ತದೆ. ಅಂತಹ ಕಥೆಗಳಲ್ಲೊಂದು ಪಾರ್ವತಿ ಕೊರವಂಜಿಯ ಕಥೆ. ಪಾರ್ವತಿಯ ವಂಶೀಯರೇ ಕೊರಮರಾದರು ಎಂದು ಈ ಕತೆ ತಿಳಿಸುತ್ತದೆ.

ಪಾರ್ವತಿಯ ತಪಸ್ಸನ್ನು ಪರೀಕ್ಷಿಸಲು ಶಿವನು ಅನೇಕ ವೇಷಗಳನ್ನು ತಾಳುತ್ತಾನೆ. ಅವುಗಳಲ್ಲಿ ಕೊರವಂಜಿಯ ವೇಷವೂ ಒಂದು. ಆ ಕೊರವಂಜಿಯ ವಂಶಜರೇ ಇಂದಿನ ಕೊರವರು ಎಂದು ಹೇಳುತ್ತಾರೆ.

ಪಾರ್ವತಿ ಒಂದು ಸಲ ಹಾವಿನ ಹೊಟ್ಟೆಯಲ್ಲಿ ಬೆಲೆಬಾಳುವ ಹರಳುಗಳನ್ನು ತುಂಬಿ ಮೇದರವನಿಗೆ ತೊಟ್ಟಿಲು ಮಾಡಲು ಕೊಟ್ಟಳಂತೆ. ಮೇದರವನು ಆ ಹಾವಿನ ಹೊಟ್ಟೆಯಲ್ಲಿರುವ ಹರಳಿನ ಕರಕರ ಧ್ವನಿಗೆ ಹೆದರಿ ಅದನ್ನು ಮುಟ್ಟಲು ಹಿಂಜರಿದನಂತೆ. ಆಗ ಪಾರ್ವತಿಯು ಮೇದಾಡನಿಗೆ ಬೇಡವಾದ ಕೆಲಸವನ್ನು ನೀನಾದರೂ ಮಾಡು ಎಂದು ಕೊರಚನೊಬ್ಬನಿಗೆ ಆ ಕೆಲಸ ಒಪ್ಪಿಸಿದಳು. ಅವನು ಹಾವನ್ನು ಸೀಳಿ ತೊಟ್ಟಿಲು ತಯಾರಿಸಿ ಕೊಟ್ಟನಂತೆ. ಇದರಿಂದ ಸಂತೃಪ್ತಳಾದ ಪಾರ್ವತಿಯು ಕೊರಚನಿಗೆ ತಾನು ಕಣಿ ಹೇಳಲು ಬಳಸುತ್ತಿದ್ದ ಬಿದಿರಿನ ಮಾಂತ್ರಿಕ ದಂಡವನ್ನು ಮತ್ತು ಮರವನ್ನು ಕೊಟ್ಟಳಂತೆ, ಮುಂದೆ ಕೊರವರ ಹೆಣ್ಣು ಮಕ್ಕಳು ಕಣಿ ಹೇಳುವುದನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿರುವುದಾಗಿ ಹೇಳುತ್ತಾರೆ.

ಭಾಗವತದ ಕಥೆಯನ್ನೇ ಹೋಲುವ ತಮಿಳುನಾಡಿನಲ್ಲಿಯ ಸ್ಥಳೀಯ ಕಥೆಯೊಂದು ಹೀಗಿದೆ.

ಬ್ರಹ್ಮನಿಂದ ನೇರವಾಗಿ ಸೃಷ್ಟಿಗೊಂಡ ಅಗ್ನೇಶ್ವತುವಿನ ಮಗನಾದ ವೇಣುಡು ಭೂಲೋಕವನ್ನು ಆಳುತ್ತಿದ್ದ. ಆದರೆ, ಉತ್ತರಾಧಿಕಾರಿಗಳು ಯಾರೂ ಹುಟ್ಟಲಿಲ್ಲ. ಸಿಂಹಾಸನಕ್ಕೆ ಉತ್ತರಾಧಿಕಾರಿಗಳನ್ನು ಕೊಡದೇ ಅವನು ಸತ್ತು ಹೋದನು. ರಾಜ್ಯಕ್ಕೆ ಉತ್ತರಾಧಿಕಾರಿಗಳು ಸಿಗುವವರೆಗೂ ಅವನ ದೇಹವನ್ನು ಸಂಸ್ಕಾರ ಮಾಡಬಾರದೆಂದು ಹಾಗೆಯೇ ರಕ್ಷಿಸಿಟ್ಟರು.ಆಗ ಏಳು ಗ್ರಹಗಳು ಏಕಾಂತ ಸಭೆ ಸೇರಿ ಮುಂದೇನು ಮಾಡಬಹುದು ಎಂದು ಆಲೋಚಿಸಿದರು. ಕಡೆಯದಾಗಿ ಅವರು ಸತ್ತ ವೇಣುಡುವಿನ ಬಲ ತೊಡೆಯಿಂದ ಒಂದು ಜೀವಿಯನ್ನು ಸೃಷ್ಟಿಸಿದರು. ಆದರೆ ಅವರ ಪ್ರಯತ್ನ ಯಶಸ್ವಿಯಾಗಲಿಲ್ಲ. ಕಾರಣ ಹಾಗೆ ಸೃಷ್ಟಿಗೊಂಡವನ ದೇಹ ವಿರೂಪವಾಗಿದ್ದುದಲ್ಲದೆ ಅವನ ಮುಖವೂ ವಿಕಾರವಾಗಿತ್ತು, ಹೀಗಾಗಿ ಅವನು ಸಿಂಹಾಸನಕ್ಕೆ ಯೋಗ್ಯನಲ್ಲ ಎಂದು ತೀರ್ಮಾನಿಸಿದರು. ಗ್ರಹಗಳು, ವೇಣುಡುವಿನ ಬಲತೋಳಿಂದ ಮತ್ತೊಬ್ಬನನ್ನು ಸೃಷ್ಟಿಸಿದರು. ಅವನು ತುಂಬಾ ಯೋಗ್ಯನಾಗಿದ್ದನು. ಅವನನ್ನು ಪ್ರೂತು ಚಕ್ರವರ್ತಿ ಎಂದು ಕರೆದು ಸಿಂಹಾಸನದಲ್ಲಿ ಕುಳ್ಳಿರಿಸಿದರು. ಇದರಿಂದ ನಿರಾಶೆಗೊಂಡ ನಿಶುಡು ತಾನು ರಾಜನಾಗದೇ ಹೋದರೆ ತನ್ನ ಸೃಷ್ಟಿಯಾದರೂ ಏಕೆ ಆಯಿತೆಂದು ದೇವರನ್ನು ಏಕಾಂತದಲ್ಲಿ ಕೇಳಿಕೊಂಡನು. ದೇವರು ಚಕ್ರವರ್ತಿ ರಾಜನಾಗಿರುವುದರಿಂದ ನಿನ್ನನ್ನು ಈಗ ಸಿಂಹಾಸನದಲ್ಲಿ ಕುಳ್ಳಿರಿಸಲು ಸಾಧ್ಯವಿಲ್ಲ. ಆದ ಕಾರಣ ನೀನು ಕಾಡನ್ನು ಆಳ ಬಹುದು ಎಂದು ಹೇಳಿದನು. ಹೀಗಾಗಿ ನಿಶಡು ಬೋಯಾ, ಚೆಂಚು ಯಾನಾಡಿ ಮತ್ತು ಕೊರಮರಿಗೆ ಜನ್ಮ ನೀಡಿದನು. ಬೋಯರು ಮಾತ್ರ ಅವನ ನ್ಯಾಯಬದ್ಧವಾದ ಮಕ್ಕಳು, ಇತರರು ಧರ್ಮಬಾಹಿರ ಮಕ್ಕಳು ಎಂದು ತಿಳಿಯಲಾಯಿತು, ತನ್ನ

ಸೃಷ್ಟಿಕರ್ತರು ಯಾರು ಎಂಬುದನ್ನು ತಿಳಿದುಕೊಳ್ಳಲು ಶಾಂತಚಿತ್ತನಾಗಿ ಕಾಯುತ್ತಿದ್ದುದರ ಕಾರಣವಾಗಿ ಅವರು ತಮ್ಮನ್ನು ತಾವೇ ಯೆರಕುಲ ಎಂದು ಕರೆದುಕೊಂಡರು.

ಮಹಾಭಾರತದಲ್ಲಿ ಕೊರವರು ಧರ್ಮರಾಜನ ವಂಶದವರೆಂದು ಸೂಚಿಸುವ ಒಂದು ಕಥೆಯಿದೆ. ಸೋದರರ ಜೊತೆ ಧರ್ಮರಾಜನು ವನವಾಸಕ್ಕೆ ಹೋದಾಗ ಅವನನ್ನು ಪ್ರೀತಿಸಿದ ಓರ್ವ ಹೆಣ್ಣು ಮಗಳು ಕಣಿ ಹೇಳುವವಳ ವೇಷಧರಿಸಿ ಹೋಗಿ ಅವನನ್ನು ವರಿಸಿದಳಂತೆ. ಆಕೆಯ ಸಂತಾನವೇ ಕೊರಮರೆಂದು ನಂಬಲಾಗುತ್ತದೆ. ಇಂದಿನ ಕೊರವರ ಚಾಣಾಕ್ಷತನ ಹಾಗೂ ಸಾಹಸಗಳನ್ನು ಹೋಲುವ ಕಾರ್ಯನಿರತ ಕುರು ಎಂಬ ಜನಾಂಗದ ಹೆಸರು ಮಹಾಭಾರತದಲ್ಲಿ ಬರುವುದಾದರೂ ಮೇಲಿನ ಕಥೆಯನ್ನು ನಂಬಲು ಅನುಮಾನಿಸಬೇಕಾಗುತ್ತದೆ. ಕೊರವರು ಮೂಲತಃ ಉತ್ತರದವರೆಂಬುವದನ್ನು ಸೂಚಿಸುವ ಪ್ರಯತ್ನ ಇಲ್ಲಿದೆ.

ಗೌರಿಮಕ್ಕಳು, ಗಂಗೆಮಕ್ಕಳು ಅಂದಿನಿಂದ ಬಿದಿರಿನ ಕೆಲಸ ಮಾಡುತ್ತಾ ಬಂದಿದ್ದಾರೆ. ಗಂಗೆಯ ಮಗ ಮೇದಾರ ಮಚ್ಚಿನ ಮೇಲ್ಭಾಗ ಹಿಡಿದಿದ್ದರಿಂದ ಅವನ ಮಚ್ಚಿಗೆ ಇಂದಿಗೂ ಹಿಡಿಯಿಲ್ಲ. ಕೊರಮರು ಬಳಸುವ ಮಚ್ಚಿಗೆ ಹಿಡಿ ಇದೆ. ಕೊರಮರು ಕೇರುವ ಮರ ಮತ್ತು ಬೀಸಣಿಗೆಗಳನ್ನು ಮಾಡುವುದಿಲ್ಲ. ಅವುಗಳ ಅಣಿ ಗೌರಿಗದ್ದುಗೆ ಎಂದು, ಕಾಲಿನಿಂದ ಮೆಟ್ಟುವುದಿಲ್ಲ. ಮೇದರು ಬಿದಿರನ್ನು ತುದಿಯಿಂದ ಸೀಳಿದರೆ ಕೊರಮರು ಬುಡದಿಂದ ಸೀಳುತ್ತಾರೆ. ಗೌರಿ ಮಕ್ಕಳಿಂದ ನಮ್ಮ ಜಾತಿ ಬೆಳೆಯಿತು. ಪಾರ್ವತಿಯಂತೆ ನಮ್ಮ ಕೊರವಂಜಿಯರು ಕಣಿ ಹೇಳುವುದನ್ನು, ಮಕ್ಕಳ ಫಲಕ್ಕೆ ಔಷಧಿ ಕೊಡುವುದನ್ನು ಬಹಳ ಹಿಂದಿನಿಂದಲೂ ರೂಢಿಸಿಕೊಂಡಿದ್ದಾರೆ. ಇದು ನಮಗೆ ದೈವದತ್ತವಾಗಿ ಬಂದ ಹಕ್ಕು ಎಂದು ಕೊರಮರು ಹೇಳುತ್ತಾರೆ.

ಭಾರತದಲ್ಲಿ ಕೃಷ್ಣ ಕೊರವಂಜಿಯ ವೇಷ ಹಾಕಿ ಸತ್ಯಭಾಮೆಯನ್ನು ಪರೀಕ್ಷಿಸಿದ ಕಥೆ ಪ್ರಸಿದ್ಧವಾಗಿದೆ. ಆ ಕೃಷ್ಣ ಕೋರವಂಜಿಯ ವಂಶದವರೇ ಕೊರವರು ಎಂದು ತಿಳಿಯಲಾಗುತ್ತದೆ.

ಅರ್ಜುನನ ತಪಸ್ಸನ್ನು ಪರೀಕ್ಷಿಸಲು ಶಿವನು ಕಿರಾತ ರೂಪ ಧರಿಸಿದನು. ಪಾರ್ವತಿ ಕಿರಾತೆಯ ವೇಷಧರಿಸಿದಳು. ಆ ಕಿರಾತೆಯೇ ಕೊರವಿಯೆಂದೂ ಅವಳ ವಂಶಜರೇ ಕೊರಮರೆಂಬುದು ಮತ್ತೊಂದು ಕಥೆ.

ಪುರಾಣಕಾಲದಿಂದಲೂ ಕೊರವಂಜಿಗಳು ಕಣಿ ಹೇಳುತ್ತಲೇ ಬಂದಿದ್ದಾರೆ. ಮನ್ಮಥ ಕೊರವಂಜಿ, ಕೃಷ್ಣ ಕೊರವಂಜಿ, ವೆಂಕಟೇಶ್ವರ ಕೊರವಂಜಿ, ಶಿವಪಾರಿಜಾತಗಳಲ್ಲಿ ಕೊರವಂಜಿಯ ಪಾತ್ರ ಬರುತ್ತಿದ್ದು, ಅವಳಿಗಿರುವ ಪುರಾಣ ಕಾಲದ ಅಸ್ತಿತ್ವವನ್ನು ಸೂಚಿಸುತ್ತವೆ.

ಬಳೆಮಲಾರ(ಬಳೆ ಜೋಡಿಸಿಕೊಂಡಿರುವುದು) ಬಗಲಲ್ಲಿ ಹಾಕಿಕೊಂಡು ಲಿಂಗ ಎದೆಮೇಲೆ ಹಾಕಿಕೊಂಡು ಕಟ್ಟೆಕೆರೆಕಡೆ ಹೋಗುತ್ತಿರಬೇಕಾದರೆ ಕಟ್ಟೆಕೆರೆ ಹದಿನೆಂಟು ಜಾತಿಯವರು (ಬೇರೆ ಬೇರೆ ಜಾತಿಯವರು) ಸ್ನಾನ ಮಾಡುತ್ತಿದ್ದರು ಅವರನ್ನು

ನೋಡಿಕೊಂಡು ನಿಂತುಬಿಟ್ಟ, ಕಟ್ಟೆಕೆರೆಯ ಹದಿನೆಂಟು ಜಾತಿಯವರು ಸ್ನಾನ ಮುಗಿಸಿಕೊಂಡು ಇವನನ್ನು ಬಿಟ್ಟು ಅವರೆಲ್ಲ ದೇವರ ಹತ್ತಿರ ವರಹ ಕೇಳಲು ಹೋದರು. ಐದು ಘಂಟೆ ಸಮಯ ಆಗಿತ್ತು, ನೀರಿನ ಕಟ್ಟೆ ಸಿಕ್ಕಿತ್ತು. ಅವನು ಬಳೆ ಮಲಾರ ಕೆಳಗಿಟ್ಟು ನೀರಿನೊಳಗಡೆ ಇಳಿದುಬಿಟ್ಟ, ಮೀನು ಹಿಡಿಯುವುದನ್ನು ಉಪ್ಪುಗಲರಶಟ್ಟಿ ನೋಡಿದ. ಉಪ್ಪುಗಲರಶಟ್ಟಿಯವನು ಬಳೆಮಲಾರ ಲಿಂಗ ಹಾಕಿಕೊಂಡು ಮುಂದಕ್ಕೆ ದೇವರ ಹತ್ತಿರ ಹೋದ, ನಮ್ಮವನು ಮೀನುಗಳನ್ನು ಪೋಣಿಸಿಕೊಂಡು ನಡುವಿಗೆ (ಸೊಂಟಕ್ಕೆ) ಕಟ್ಟಿಕೊಂಡು ಹೋದನು. ಅಷ್ಟೋತ್ತಿಗಾಗಲೆ ಎಲ್ಲರಿಗೂ ಒಂದೊಂದು ಭಾಷೆ, ಜಾತಿಯನ್ನು ಕೊಟ್ಟು ಕಳುಹಿಸಿದ್ದ. ನಂತರ ಹೋದ ಇವನು ವರಹ ಕೇಳಿದ ಆಗ ದೇವರು ಇವನನ್ನು ನೋಡಿ ಸೊಂಟಕ್ಕೆ ಕಟ್ಟಿಕೊಂಡಿರುವುದು ಏನು ಎಂದು ಕೇಳಿದ ಆಗ ಅವನು ಮೀನುಗಳಿಗೆ ಕೊರಮಮೀನು ಎಂದ ಆಗ ದೇವರು ಹಾಗಾದರೆ ನೀನು ಕೊರಮನೇ ಸರಿ ಎಂದ. ಆಗ ಇವನು ಮುಂದಕ್ಕೆ ಜೀವನಕ್ಕೆ ಏನು ಮಾಡೊದು ಸಾಮಿ? ಎಂದ ಪರಮೇಶ್ವರನ ಹತ್ತಿರ ತ್ರಿಶೂಲ ಇಸುಕೊಳ್ಳುವುದು. ಅದೇ ಮಚ್ಚು. ರಾಮನ ಹತ್ತಿರ ಬಾಣ ತೇಗೆದುಕೊಳ್ಳುವುದು. ಬಾಣವೆ ಅಂಬುಗತ್ತಿ ಇವೆರಡು ತೆಗೆದುಕೊಂಡು ಚಾಮುಂಡಮ್ಮನ ಹತ್ತಿರ ಹೋಗಿ ಕಣಿ ಕುಕ್ಕೆ ತೆಗೆದುಕೋ ಎಂದ. ಬೆಟ್ಟಗೆ ಗಡ (ಬಿದಿರು) ತರುವುದು ಹೊಟ್ಟೆ ಹೊರಿಯುವುದು. ಭಾಷೆ ಹೆಂಗೆ ಸಾಮಿ ಎಂದು ಕೇಳಿದಾಗ, ಎಲ್ಲ ಭಾಷೆಗಳು ಸೇರಿ ನಿನ್ನ ಭಾಷೆ, ಕುಲಹದಿನೆಂಟು ಮಾತು ನಿನ್ನ ಮಾತು. ಮೀನು ಹಿಡಿದುಕೊಂಡು ಬಂದಿದ್ದಕ್ಕೆ ಸಂತೆಗೆ ಸಾವಿರ ಬಂದರೂ ಸಂಜೆಗೆ ತೀರಿ ಹೋಗಲಿ ಎಂದು ಶಾಪ ಕೊಟ್ಟನು.

ಈ ಕಥೆಗಳಲ್ಲಿ ಪಾರ್ವತಿ, ಶಿವ, ನಿಶಡುವಿಗೆ ಸಂಬಂಧಿಸಿದವು ಕೊರವರ ದ್ರಾವಿಡ ಮೂಲವನ್ನು ಸೂಚಿಸಿದರೆ ಮಹಾಭಾರತ ಭಾಗವತದ ಕಥೆಗಳು ಆರ್ಯ ಮೂಲವನ್ನು ಸಾಧಿಸಲು ಪ್ರಯತ್ನಿಸುತ್ತವೆ. ಈ ಕಾರಣದಿಂದಲೇ ವಿದ್ವಾಂಸರಲ್ಲಿ ಇವರು ದಕ್ಷಿಣ ಭಾರತದ ಬುಡಕಟ್ಟಿಗೆ ಸೇರಿದವರೋ ಅಥವಾ ಉತ್ತರದಿಂದ ಬಂದವರೋ ಎಂಬುದರ ಬಗೆಗೆ ಭಿನ್ನಾಭಿಪ್ರಾಯಗಳು ಉಂಟಾಗಿವೆ.

ಆದರೆ ಕೊರವರ ಸಂಪ್ರದಾಯಗಳು, ಆಚರಣೆಗಳು, ಸಂಸ್ಕೃತಿಗಳು, ರೀತಿ ನೀತಿಗಳು, ವೃತ್ತಿಗಳು, ಆಡುವ ಭಾಷೆ ಜೀವನವಿಧಾನ, ಇವೆಲ್ಲವನ್ನು ನೋಡಿದರೆ ಇವರು ದ್ರಾವಿಡ ಮೂಲದಿಂದ ಬಂದವರೆಂದು ಸ್ಪಷ್ಟವಾಗುತ್ತದೆ. ಕೊರವರನ್ನು ಕುರಿತು ಇನ್ನೂ ಅಧ್ಯಯನ ಅಷ್ಟೊಂದು ಆಳವಾಗಿ ನಡೆದಿಲ್ಲ. ಅದಕ್ಕಾಗಿ ಅವರ ಮೂಲವನ್ನು ಕುರಿತು ಈ ಕಥೆಗಳನ್ನು ಬಿಟ್ಟರೆ ಬೇರೆ ಮೂಲ ಆಕರ ಸಾಮಗ್ರಿಗಳು ಕೊರವರ ಮೂಲದ ಬಗೆಗೆ ಲಭ್ಯವಾಗಿಲ್ಲ.

# ೨

# ಮೂಲ ಮತ್ತು ಪ್ರಸಾರ

## ಮೂಲ ಸ್ಥಾನ, ವಲಸೆ ಮಾರ್ಗ

ಪ್ರತಿಯೊಂದು ಮಾನವ ಸಮುದಾಯಕ್ಕೂ ಸಾಮಾನ್ಯವಾಗಿ ಅದರ ಮೂಲ ಹಾಗೂ ಹಿನ್ನೆಲೆಗೆ ಸಂಬಂಧಿಸಿದಂತೆ ಒಂದೊಂದು ಇತಿಹಾಸ ಇದ್ದೇ ಇರುತ್ತದೆ. ಒಂದು ಸಮುದಾಯದ ಮೂಲವನ್ನು ಕಂಡುಕೊಳ್ಳಬೇಕಾದರೆ ಮಾನವಶಾಸ್ತ್ರದ ಕಡೆ ಗಮನಹರಿಸುವುದು ಅವಶ್ಯವಾಗಿದೆ. ಸಮುದಾಯದ ಸಂಸ್ಕೃತಿಯ ಅಧ್ಯಯನಕ್ಕೆ ಮಾನವಶಾಸ್ತ್ರ ಕ್ಷೇತ್ರಕಾರ್ಯದ ಅನುಭವಗಳು ಮೂಲಾಧಾರಗಳಾಗುತ್ತವೆ. ಕೊರವರು ಮೂಲತಃ ಬುಡಕಟ್ಟಿನವರಾಗಿದ್ದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿದ್ದವರು. ಕಾಲ ಕ್ರಮೇಣವಾಗಿ ಗುಂಪುಗಳನ್ನು ಕಟ್ಟಿಕೊಂಡು ಒಂದೆಡೆ ಸ್ಥಿರವಾಗಿ ನೆಲೆಯೂರಿ, ನಾಗರೀಕ ಜೀವನ ಪ್ರಾರಂಬಿಸಲು ಪ್ರಯತ್ನಿಸಿದವರು. ತಮಿಳುನಾಡು ಹಾಗೂ ಆಂಧ್ರಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವ ಕೊರವರು ಎಲ್ಲಿಂದ ಬಂದರೆಂದು ಹೇಳುವುದು ಸ್ವಲ್ಪ ಕಷ್ಟದ ಕೆಲಸವೇ ಆಗಿದೆ. ಆದರೆ ಭಾಷೆ ಹಾಗೂ ಜೀವನಶೈಲಿಯನ್ನು ನೋಡಿದರೆ ಇವರು ದಕ್ಷಿಣ ಭಾರತದವರು ಅದರಲ್ಲಿಯೂ ತಮಿಳುನಾಡಿನಿಂದ ವಲಸೆ ಬಂದವರೆಂದು ಹೇಳಬಹುದಾಗಿದೆ. ಬದುಕಿನ ಅನಿವಾರ್ಯ ಕಾರಣಗಳಿಂದಾಗಿ ದೇಶದ ಹಲವು ಭಾಗಗಳಲ್ಲಿ ಚದುರಿಹೋಗಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಡುತ್ತವೆ. ಕೊರಮ ಬುಡಕಟ್ಟು ಇಂದು ಬೇರೆ ಜಾತಿ, ಸಮುದಾಯಗಳೊಂದಿಗೆ ಸಹಬಾಳ್ವೆ ಮಾಡುತ್ತಿದೆ. ಹೀಗಾಗಿ ಅನ್ಯ ಸಮುದಾಯಗಳ ಪ್ರಭಾವಕ್ಕೆ ಒಳಗಾಗಿ ತಮ್ಮ ಮೂಲದ ಎಷ್ಟೋ ಅಂಶಗಳನ್ನು ಕಳೆದುಕೊಳ್ಳುತ್ತಿದೆಯೇನೋ ಅನಿಸುವುದು. ಆದರೂ ಈ ಸಮುದಾಯವು ತನ್ನ ಮೂಲವನ್ನು ಉಳಿಸಿಕೊಳ್ಳಲು ನಿರಂತರವಾದ ಹೋರಾಟವನ್ನು ಮಾಡುತ್ತಿರುವುದನ್ನು ಗಮನಿಸಬಹುದು.

ಥರ್ಸ್ಟನ್ ಅವರು ತಿಳಿಸುವಂತೆ ಉತ್ತರ ಹಾಗೂ ದಕ್ಷಿಣ ಅರ್ಕಾಟ್‌ಗಳಲ್ಲಿ ಕೊರಚ, ಕೊರ್ಚ ಎಂದು ಕರೆಯುತ್ತಾರೆ. ಆದರೆ, ಅಕ್ಕಪಕ್ಕದ ಜಿಲ್ಲೆಗಳಲ್ಲಿ ಅವರನ್ನೆ ಯರುಕಲ ಅಥವಾ ಯರಕಲ ಎಂದು ಕರೆಯಿಸಿಕೊಳ್ಳುತ್ತಾರೆ. (ಥರ್ಸ್ಟನ್:೨೩೪) ಇಲ್ಲಿ ಒಂದೇ ಪಂಗಡದ ಜನರನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಿದ್ದ ಬಗೆಗೆ, ಅಲ್ಲದೆ

ತಮಿಳುನಾಡಿನ ಕೆಲ ಭಾಗಗಳಲ್ಲಿ ಇವರು ವಾಸವಾಗಿದ್ದ ಅಂಶಗಳನ್ನು ಈ ದಾಖಲೆ ಸ್ಪಷ್ಟಪಡಿಸುತ್ತದೆ. ಹೀಗೆ ಮುಂದುವರೆಯುತ್ತಾ ಕೊರವರು ಹಾಗೂ ಕೇಪ್ ಮಾರಿಗಳು ಒಂದೇ ಮೂಲದವರು. ಅವರುಸಹ ತಮಿಳುನಾಡಿನ ತಂಜಾವೂರು ಜಿಲ್ಲೆಯ ಒಂದು ಹಳ್ಳಿಯಿಂದ ಹೊರಟು ಭಾರತದಾದ್ಯಂತ ಚದುರಿರಬೇಕು(ಬಿ ವಿ ಮಲ್ಲಾಪೂರ) ಎನ್ನುವಲ್ಲಿಯೂ ಕೂಡ ಕೊರಮರು ಮತ್ತು ಕೇಪಮಾರಿಗಳು ಒಂದೇ ಮೂಲದವರು ಎಂಬ ಸತ್ಯಾಂಶವನ್ನು ಕಾಣಬಹುದಾಗಿದೆ.

ಹೀರೇಂದ್ರ ಕೆ ರಕ್ಷಿತ್ ಅವರು ಈಡಿಗರು, ಬೆಸ್ತರು ಮತ್ತು ಯರುಕುಲರು ತಮಿಳುನಾಡಿನಿಂದ ವಲಸೆ ಬಂದವರು ಎಂದು ತಿಳಿಸುತ್ತಾರೆ.

ಆರ್ ಇ ಎಂಥೋವನ್ ಅವರು ಮೈಸೂರು ಮತ್ತು ಮದ್ರಾಸ್ ಪ್ರಾಂತದಲ್ಲಿದ್ದ ಇವರ ವಾಸದ ನೆಲೆಗಳನ್ನು ಹೇಳುವುದರ ಜೊತೆಯಲ್ಲಿ ಅಲ್ಲಿ ಅವರನ್ನು ಕುರುವಾನ್ಸ್ ಎಂದು ಕರೆಯುತ್ತಾರೆಂಬ ಅಂಶ ಅವರ ಮೂಲದ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ.

ಬೊಂಬಾಯಿ ಪ್ರಾಂತ್ಯದ ಕೊರಮರ ಬಗೆಗೆ ಬರೆದಿರುವ ಮೈಕೇಲ್ ಕೆನಡಿ ಅವರು ಹೇಳಿರುವ ಹೆಸರುಗಳಿಗಿಂತ ಸ್ವಲ್ಪ ಭಿನ್ನವಾಗಿವೆ. ಸಾಂತಿಪಾಡಿಯಾ, ಕಾವಾಡಿಯಾ, ಮ್ಯಾನ್‌ಪಾಡಿಯಾ ಎನ್ನುವ ಈ ಹೆಸರುಗಳು ಸಾತಪಾಡಿ, ಕಾವಾಡಿ, ಮಾನಪಾಡಿ, ರೂಪಕ್ಕಿಂತ ಪೂರ್ವದವಾಗಿದ್ದರೂ ನಂತರ ರೂಪಾಂತರಗೊಂಡಿರುವ ಸಾಧ್ಯತೆ ಇದೆ.

ತಮಿಳುನಾಡಿನಲ್ಲಿ ಸುಮಾರು ೪೭ ಹೆಸರುಗಳಿಂದ ಗುರುತಿಸಲ್ಪಡುವುದರ ಬಗೆಗೆ ಮತ್ತು ಅವರ ಮೂಲದ ಬಗೆಗೆ "These people are the aborigines of hills and valleys of South India" ಎಂದು ಶ್ರೀಮತಿ ಜ್ಞಾನಮಾಣಿಕಮ್ಮಾಳ್ ಹೇಳುತ್ತಾರೆ.

ಮಲ್ಲಾಪುರ ಬಿ ವಿ ಅವರು ಜಾನಪದ ಸಾಹಿತ್ಯ ದರ್ಶನ (ಭಾಗ ೬) ತಮ್ಮ ಲೇಖನದಲ್ಲಿ ಕೊರವ ಅಥವಾ ಕೊರಚರಲ್ಲಿ ಪಟ್ವಾಡಿ, ಕಾವಡಿ, ಮೇನಪಾಡಿ, ಮೆಂಡ್ರಗುಟ್ಟಿ ಎಂಬ ನಾಲ್ಕು ಬೆಡಗುಗಳಿವೆ ಎಂದು ಹೇಳುತ್ತಾರೆ.

ಹಂಪ ನಾಗರಾಜಯ್ಯ ಅವರು ತಮಿಳಿನಲ್ಲಿ ಕೈಕಾಡಿ, ಕೊರ್ವಿ ಮತ್ತು ಯರಕುಲ ಮುಂತಾದ ಭಾಷೆಗಳಿವೆ ಎಂದಿದ್ದಾರೆ. ಕೈಕಾಡಿ, ಕೋರ್ವೀ ಮತ್ತು ಯರಕುಲ ಇವೆಲ್ಲ ಒಂದೇ ಬುಡಕಟ್ಟನ್ನು ಗುರುತಿಸುವ ಹೆಸರುಗಳು. ಕೊರಮರು ಮಹಾರಾಷ್ಟ್ರದಲ್ಲಿ ಕೈಕಾಡಿಗಳೆಂದು ಕರೆಸಿಕೊಂಡರೆ, ತೆಲುಗನಾಡಿನಲ್ಲಿ ಯರುಕುಲರು ಎಂದು ಕರೆಸಿ ಕೊಳ್ಳುತ್ತಾರೆ. ಅಲ್ಲದೆ ದ್ರಾವಿಡ ಭಾಷೆಗಳ ಉಪಭಾಷೆಗಳ ಬಗೆಗೆ ಹೇಳುತ್ತಾ ತಮಿಳಿನಲ್ಲಿ ಕೊಯಮತ್ತೂರಿನ ತಮಿಳು, ಚೋಳ ದೇಶದ ತಮಿಳು, ಮೈಸೂರು ತಮಿಳು, ಕೈಕಾಡಿ ತಮಿಳು, ಯರಕುಲ ತಮಿಳು, ಜಾಫ್ನಾ ತಮಿಳು, ಸಿಲೋನಿನ ತಮಿಳು ಇತ್ಯಾದಿ ಎಂದು ಉದಾಹರಿಸಿದ್ದಾರೆ.

ಒಟ್ಟಾರೆಯಾಗಿ ಕೊರಮರೆಂಬ ಬುಡಕಟ್ಟಿನ ಜನರ ಮೂಲ ನೆಲೆಯು ತಮಿಳು ನಾಡಿನ ಒಂದು ಪರ್ವತ ಪ್ರಾಂತವಾಗಿದೆ. ಅದು ಬಹುಶಃ ತಂಜಾವೂರು, ಕೊಯಂಬ

ತ್ತೂರು, ದಕ್ಷಿಣ ಅರ್ಕಾಟ್ ಜಿಲ್ಲೆಗಳಲ್ಲಿಯ ಗುಡ್ಡಗಾಡುಗಳ ಒಂದು ಭಾಗ ಎಂದು ಹೇಳಬಹುದು. ಕೊರಮರ ಮೂಲಭಾಷೆ ತಮಿಳಿನ ಉಪಭಾಷೆಯಾದ ಕುರ್ಚ್ಹೊ ಕುಳವ ಆಗಿರುವಂತೆ ತೋರುತ್ತದೆ. ಇದೇ ಇವರ ಗೋತ್ರ ಸೂತ್ರ ಮತ್ತು ಆಚರಣೆಗಳನ್ನು ಬಿಂಬಿಸುವ ಶಬ್ದಗಳನ್ನೊಳಗೊಂಡ ಭಾಷೆ, ವೃತ್ತಿಗನುಸರಿಸಿ ಇತರ ಭಾಷೆಗಳನ್ನೂ ರೂಢಿಸಿಕೊಂಡರೂ ತಮ್ಮ ಮೂಲಭಾಷೆಯನ್ನು ಇಂದಿಗೂ ಕೊರಮ ಬುಟ್ಟಕಟ್ಟು ಕಳೆದುಕೊಂಡಿಲ್ಲವೆಂಬುದು ನಿಜಕ್ಕೂ ಸತ್ಯಸಂಗತಿಯಾಗಿದೆ. ಜನಪದ ಸಾಹಿತ್ಯದ ಕೊರವಂಜಿ ಪಾತ್ರ ವಿಚಿತ್ರ ಭಾಷೆಯಲ್ಲಿ ಸಂಭಾಷಿಸುವುದನ್ನು ಕಾಣಬಹುದು

**ಭೌಗೋಳಿಕತೆ**

ಪ್ರಾರಂಭದಲ್ಲಿ ಕೊರವರು ಗುಡ್ಡ ಗಾಡು ಪ್ರದೇಶಗಳು, ಕಣಿವೆ ಕಂದರಗಳು, ಈಚಲು ಮರದ ಗುತ್ತಿಗಳು, ಬಿದಿರು ಸಿಗುವ ಕಾಡು ಮೇಡಿನ ತಗ್ಗು ಪ್ರದೇಶಗಳಲ್ಲಿ ಅಲೆಮಾರಿ ಗಳಾಗಿ ವರ್ಷಪೂರ್ತಿ ಊರಿಂದೂರಿಗೆ ಸಂಚಾರಿಸುತ್ತಾ ಊರಿನ ಹೊರಗಿರುವ ಪಾಳು ಗುಡಿಗಳಲ್ಲಿ ಅಥವಾ ತಾತ್ಕಾಲಿಕವಾಗಿ ಗುಡಾರಗಳನ್ನು ನಿರ್ಮಿಸಿಕೊಂಡು ಕೆಲವು ದಿನಗಳು ಬಿಡುಬಿಡುತ್ತಿದ್ದರು. ಇತ್ತೀಚೆಗೆ ಇವರು ಒಂದೇ ಕಡೆ ನೆಲೆ ನಿಲ್ಲುವುದನ್ನು ರೂಢಿಸಿಕೊಳ್ಳುತ್ತಿದ್ದಾರೆ.

ಭಾರತದಾದ್ಯಂತ ಕಂಡುಬರುವ ಕೊರಮರ ಮೂಲವು ತಮಿಳುನಾಡು ಇರ ಬೇಕೆಂದು ಅಧ್ಯಯನಕಾರರು ಗುರುತಿಸಿದ್ದಾರೆ.

ಕೋಷ್ಟಕ: ೨.೧.

**ಭಾರತದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವ ಕೊರಮರ ಜನಸಂಖ್ಯೆ (೨೦೦೧)**

| ರಾಜ್ಯಗಳು | | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಆಂಧ್ರಪ್ರದೇಶ (ಯರುಕುಲ) | ಒಟ್ಟು<br>ಗ್ರಾಮೀಣ<br>ನಗರ | ೨೨೦,೫೧೮<br>೧೭೧,೧೧೮<br>೪೯,೪೦೦ | ೨೧೬,೯೪೧<br>೧೬೭,೮೭೩<br>೪೯,೦೬೮ | ೪೩೭,೪೫೯<br>೩೩೮,೯೯೧<br>೯೮,೪೬೮ |

ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಕೊರಮರು ನೆಲೆಸಿದ್ದಾರೆ. ಈಚಲುಗರಿಯಿಂದ ಹಳ್ಳಿಯ ಜನಕ್ಕೆ ಬೇಕಾದ ಮಂಕರಿ, ಕುಕ್ಕೆ, ಮೊರ, ಬುಟ್ಟಿ, ತಟ್ಟಿ, ಬಾರಿಗೆ ಇತ್ಯಾದಿಗಳನ್ನು ತಯಾರಿಸಿ, ಅವುಗಳನ್ನು ತಲೆ ಮೇಲೆ ಹೊತ್ತು ಅಕ್ಕಪಕ್ಕದ ಹಳ್ಳಿಗಳಲ್ಲಿ ಸುತ್ತಿ ಮಾರಾಟ ವನ್ನು ಮಾಡಿ ಅದರಿಂದ ಬರುವ ದವಸಧಾನ್ಯಗಳು, ಹಣವನ್ನು ಪಡೆಯುವರು.

ಜನಸಂಖ್ಯೆ: ಕನ್ನಡ ಪುಸ್ತಕ ಪ್ರಾಧಿಕಾರದ ಮೂಲಕ ಕೊರಮರ ಸಮಗ್ರ ಅಧ್ಯಯನ ಕ್ಕಾಗಿ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯ ದಲ್ಲಿ ಸಂಗ್ರಹಿಸಿದ ವಿವರಗಳ ಅನುಸಾರವಾಗಿ ಅವರಲ್ಲಿರುವ ಕುಟುಂಬವಾರು, ಲಿಂಗವಾರು ಜನಸಂಖ್ಯೆ, ಲಿಂಗಾನುಪಾತ, ಕುಟುಂಬ ಗಾತ್ರ ಇತ್ಯಾದಿಗಳನ್ನು ಸಂಗ್ರಹಿಸ

ಲಾಗಿದೆ. ಇದರಲ್ಲಿ ಒಟ್ಟು ೮೩೦ ಕುಟುಂಬಗಳನ್ನು ಮಾದರಿಯಾಗಿ ಸಮೀಕ್ಷೆ ಮಾಡಲಾಯಿತು. ಇಡೀ ಕರ್ನಾಟಕದಲ್ಲಿ ಲಕ್ಷದ ಮೇಲ್ಪಟ್ಟು ಕೊರಮರ ಜನಸಂಖ್ಯೆ ಇರುವುದರಿಂದ ಎಲ್ಲಾ ಕುಟುಂಬಗಳನ್ನು ಅಧ್ಯಯನದ ಕಾಲಮಿತಿಯೊಳಗೆ ಸಮೀಕ್ಷೆ ಮಾಡುವುದು ಅಸಾಧ್ಯದ ಮಾತಾದುದರಿಂದ ಈ ರೀತಿಯ ಸ್ಯಾಂಪಲಿಂಗ್ ಸಮೀಕ್ಷೆಯನ್ನು ಮಾಡಲಾಗಿದೆ. ಮುಖ್ಯವಾಗಿ ೨೦೦೧ರ ಜನಗಣತಿಗೆ ಹೊಂದುವಂತೆ ಸಮೀಕ್ಷೆ ಮಾಡಿದ ಕುಟುಂಬ ಹಾಗೂ ಜನಸಂಖ್ಯೆಯನ್ನು ರ‍್ಯಾಂಡಮ್ ಆಗಿ ನೋಡುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಕೊರವರ ಜನಸಂಖ್ಯೆ ಒಟ್ಟಾರೆಯಾಗಿ ರಾಜ್ಯದಲ್ಲಿ ಎಷ್ಟಿದೆ ಎಂಬುದು ೨೦೦೧ ರ ಜನಗಣತಿಯಲ್ಲಿ ದೊರೆತರು ಕೂಡಾ ಅದರಲ್ಲಿ ಕೊರಮರ ಎಲ್ಲಾ ಪಂಗಡಗಳು ಸೇರಿರುವ ಸಾಧ್ಯತೆ ಕಡಿಮೆ ಇದೆಯೆನಿಸುತ್ತದೆ. ಕೊರಮ, ಕೊರವ ಹಾಗೂ ಕೊರಚ, ಕುರುವನ್, ಕೆಪ್‌ಮಾರಿ, ಬಜಂತ್ರಿ, ವಾಜಂತ್ರಿ, ಕುಂಚಿಕೊರವ ಕೈಕಾಡಿ, ಯರುಕುಲ ಹೀಗೆ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಭಿನ್ನವಾದ ಹೆಸರುಗಳಿಂದ ಇವರನ್ನು ಕರೆಯಲಾಗುತ್ತದೆ. ಮೂಲತಃ ಮೇಲಿನ ಹೆಸರುಗಳ ಎಲ್ಲಾ ಸಮುದಾಯಗಳೂ ಕೊರಮ ಸಮುದಾಯಕ್ಕೆ ಸೇರಿದವರಾಗಿದ್ದು, ಸಮಾನ ಆಚಾರ ವಿಚಾರಗಳು ಹೊಂದಿವೆ. ಕೇವಲ ಬಂಧುತ್ವದ ವಿಚಾರದಲ್ಲಿ ಮಾತ್ರ ಬಜಂತ್ರಿ ಕೊರಮರಿಗೂ ಮತ್ತು ಕುಂಚಿಕೊರಮರಿಗೂ ಸ್ವಲ್ಪ ಭಿನ್ನತೆ ಕಂಡುಬರುತ್ತದೆ.

೧೯೮೧ರ ಹಾಗೂ ೨೦೦೧ರ ಭಾರತೀಯ ಜನಗಣತಿಯಲ್ಲಿ ಈ ಎಲ್ಲಾ ಪಂಗಡಗಳನ್ನು, ಬೇರೆ ಬೇರೆಯಾಗಿಯೇ ಗುರುತಿಸಲಾಗಿದೆ.೧೯೮೧ರ ಪ್ರಕಾರ ಕರ್ನಾಟಕದಲ್ಲಿರುವ ಕೊರಮರ ಜನಸಂಖ್ಯೆ ೭೯,೧೩೭. ಕೊರಚರು ೩೨,೯೮೩. ಅಂದರೆ ಕೊರಮ, ಕೊರಚರ ಒಟ್ಟು ಜನಸಂಖ್ಯೆ ೧,೧೨,೦೬೦. ಇರುವುದು. ೨೦೦೧ರ ಜನಗಣತಿ ಪ್ರಕಾರ ಕೊರಮ ೧,೧೩,೧೧೦, ಕೊರಚ ೪೯,೧೮೪, ಕುರುವನ್ ೭೨೩, ಕೇಪ್‌ಮಾರಿ ೧೨. ಈ ಎಲ್ಲ ಹೆಸರುಗಳನ್ನು ಹೊಂದಿರುವ ಕೊರಮರ ಒಟ್ಟು ಜನಸಂಖ್ಯೆಯು ೧,೬೪,೯೭೯ ರಷ್ಟಾಗುತ್ತದೆ.

ಕೊರಮ ಅಥವಾ ಕೊರವರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ವಾಸವಾಗಿದ್ದಾರೆ. ಕಾಲ ಕಾಲಕ್ಕೆ ಜಿಲ್ಲೆಯಿಂದ ಜಿಲ್ಲೆಗೆ ಈ ಸಮುದಾಯ ವಲಸೆ ಹೋಗುವುದರಿಂದ ಜಿಲ್ಲೆಯಿಂದ ಜಿಲ್ಲೆಗೆ ಜನಸಂಖ್ಯೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಕಂಡುಬರಬಹುದಾಗಿದೆ.

ಕೋಷ್ಟಕ: ೨.೨.

ಭಾರತದ ಪರಿಶಿಷ್ಟ ಜಾತಿ ಪಟ್ಟಿಯಲ್ಲಿರುವ ಕೊರಮರ ಜನಸಂಖ್ಯೆ (೨೦೦೧)

| ರಾಜ್ಯಗಳು | | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಮಹಾರಾಷ್ಟ್ರ ಕೈಕಾಡಿ | ಒಟ್ಟು | ೨,೬೯೫ | ೨,೫೩೭ | ೫,೨೩೨ |
| | ಗ್ರಾಮೀಣ | ೧,೩೮೫ | ೧,೩೩೬ | ೨,೭೨೧ |
| | ನಗರ | ೧,೩೧೦ | ೧,೨೦೧ | ೨,೫೧೧ |
| ಕೇರಳ ಕುರುವನ್ ಇತರೆ | ಒಟ್ಟು | ೧೩೧,೫೧೧ | ೧೪೨,೧೦೬ | ೨೭೩,೬೧೭ |
| | ಗ್ರಾಮೀಣ | ೧೧೮,೮೧೩ | ೧೨೮,೩೫೩ | ೨೪೭,೧೬೬ |
| | ನಗರ | ೧೨,೬೯೮ | ೧೩,೭೫೩ | ೨೬,೪೫೧ |
| ತಮಿಳುನಾಡು ಕುರುವನ್ | ಒಟ್ಟು | ೫೧,೭೦೭ | ೫೨,೨೬೮ | ೧೦೩,೯೭೫ |
| | ಗ್ರಾಮೀಣ | ೨೬,೨೯೨ | ೨೬,೫೦೯ | ೫೨,೮೦೧ |
| | ನಗರ | ೨೫,೪೧೫ | ೨೫,೭೫೯ | ೫೧,೧೭೪ |
| ಪಾಂಡಿಚೆರಿ ಕುರುವನ್ | ಒಟ್ಟು | ೬೨೦ | ೭೧೧ | ೧,೩೩೧ |
| | ಗ್ರಾಮೀಣ | ೨೨೯ | ೨೪೧ | ೪೭೦ |
| | ನಗರ | ೩೯೧ | ೪೭೦ | ೮೬೧ |

ಹಾಗೆ ಕರ್ನಾಟಕದಲ್ಲಿ ನೆಲೆಸಿರುವ ಕೊರಮ, ಕೊರಚ, ಕೊರವ, ಕೇಪ್ ಮಾರಿ ಮುಂತಾದವುಗಳ ಜನಸಂಖ್ಯೆಯು ಈ ಕೆಳಗಿನಂತಿದೆ.

ಕೋಷ್ಟಕ: ೨.೩. ಕರ್ನಾಟಕ ಪರಿಶಿಷ್ಟ ಜಾತಿಯ ಕೊರಮ, ಕೊರಚ, ಕೇಪ್‌ಮಾರಿಸ್ ಕುರುವನ್ ಜನಸಂಖ್ಯೆ (೨೦೦೧)

| ಜಾತಿಗಳು | | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಕೊರಮ | ಒಟ್ಟು | ೫೮,೨೭೯ | ೫೬,೮೩೧ | ೧೧೫,೧೧೦ |
| | ಗ್ರಾಮೀಣ | ೩೯,೩೩೦ | ೩೮,೦೯೫ | ೭೭,೪೨೫ |
| | ನಗರ | ೧೮,೯೪೯ | ೧೮,೭೩೬ | ೩೭,೬೮೫ |
| ಕೊರಚ | ಒಟ್ಟು | ೨೪೮೯೩ | ೨೪೨೯೧ | ೪೯೧೮೪ |
| | ಗ್ರಾಮೀಣ | ೧೭೯೯೨ | ೧೭೭೬೭ | ೩೫೭೫೯ |
| | ನಗರ | ೬೯೦೧ | ೬೫೨೪ | ೧೩೪೨೫ |
| ಕೆಪ್ ಮಾರ್ಸಿ | ಒಟ್ಟು | ೮ | ೪ | ೧೨ |
| | ಗ್ರಾಮೀಣ | ೦ | ೧ | ೧ |
| | ನಗರ | ೮ | ೩ | ೧೧ |
| ಕುರುವನ್ | ಒಟ್ಟು | ೩೪೨ | ೩೩೧ | ೬೭೩ |
| | ಗ್ರಾಮೀಣ | ೧೩೬ | ೧೨೫ | ೨೬೧ |
| | ನಗರ | ೨೦೬ | ೨೦೬ | ೪೧೨ |

ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮೀಕ್ಷೆಯಲ್ಲಿ ಒಟ್ಟು ಒಂಭತ್ತು ಜಿಲ್ಲೆಗಳನ್ನು ಸಮೀಕ್ಷಿಸಲಾಗಿದೆ. ಅದರ ಒಟ್ಟು ವಿವರ ಈ ಕೆಳಗಿನಂತಿದೆ

**ಕೋಷ್ಟಕ: ೨.೪. ಸಮೀಕ್ಷೆಗೊಳಪಟ್ಟ ಕರ್ನಾಟಕದ ಕೊರಮರ ಜಿಲ್ಲಾವಾರು ಮತ್ತು ಲಿಂಗವಾರು ಜನಸಂಖ್ಯೆ (೨೦೦೭)**

| ಸಂ. | ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಬೆಂಗಳೂರು | ೧೩ | ೩೧ | ೨೭ | ೫೮ |
| ೨ | ಬಳ್ಳಾರಿ | ೧೫೧ | ೨೮೮ | ೨೪೬ | ೫೩೪ |
| ೩ | ಬೆಳಗಾವಿ | ೧೫ | ೪೦ | ೩೪ | ೭೪ |
| ೪ | ಬೀದರ | ೧೩೮ | ೩೩೦ | ೨೮೩ | ೬೧೩ |
| ೫ | ಬಿಜಾಪುರ | ೩೮ | ೯೪ | ೯೮ | ೧೯೨ |
| ೬ | ಗುಲಬರ್ಗಾ | ೨೮೯ | ೭೮೭ | ೮೯೯ | ೧೬೮೬ |
| ೭ | ಕೊಪ್ಪಳ | ೬೭ | ೧೯೧ | ೧೯೬ | ೩೮೭ |
| ೮ | ಮೈಸೂರು | ೧೭ | ೪೧ | ೩೪ | ೭೫ |
| ೯ | ರಾಯಚೂರು | ೧೦೨ | ೩೩೮ | ೨೮೫ | ೬೨೩ |
| | ಒಟ್ಟು | ೮೩೦ | ೨೨೪೦ | ೨೦೧೨ | ೪೨೫೨ |

ಗ್ರಾಮೀಣ ಹಾಗೂ ನಗರ ಜನಸಂಖ್ಯೆ

ಕೊರಮರು ಪಕ್ಕದ ಕಾಡಿಗೆ ಹೋಗಿ ಈಚಲ ಬರಲು, ಗರಿ ಮುಂತಾದವುಗಳನ್ನು ತಂದು ಬಾರಿಗೆ, ಪುಟ್ಟಿ, ಚಾಪೆ ಮುಂತಾದವುಗಳನ್ನು ತಯಾರಿಸಿ ಮಾರುವ ಕಾಯಕದಲ್ಲಿ ನಿರತರಾಗಿರುವುದನ್ನು ಕಾಣಬಹುದಾಗಿದೆ. ಹೆಚ್ಚಾಗಿ ರೈತರಿಗೆ ಅವಶ್ಯವಾದ ವಸ್ತುಗಳನ್ನು ತಯಾರಿಸುವುದರಿಂದ ಈ ಸಮುದಾಯದವರು ಗ್ರಾಮೀಣ ಪ್ರದೇಶದಲ್ಲಿಯೇ ಹೆಚ್ಚಾಗಿ ಕಂಡುಬರುವರು. ೨೦೦೧ ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕೊರಮರು ವಾಸವಾಗಿರುವುದು ಕಂಡುಬರುತ್ತದೆ. ಗ್ರಾಮೀಣ ಪ್ರದೇಶದ ಜನಸಂಖ್ಯೆ ಒಟ್ಟು ೧,೧೩,೪೪೬, ಅದರಲ್ಲಿ ಪುರುಷರು ೫೭,೪೫೮, ಮಹಿಳೆಯರು ೫೫೯೮೮ ರಷ್ಟು ಎಂದು ದಾಖಲಿಸಲಾಗಿದೆ. ೨೦೦೭ರ ಸಮೀಕ್ಷೆಯಲ್ಲಿಯೂ ಕೊರಮರು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿ(ಶೇ.೫೭.೦೧)ನೆಲೆಸಿರುವುದು ಕಂಡು ಬಂದಿದೆ.

ಇನ್ನು ಪಟ್ಟಣದಲ್ಲಿ ವಾಸಿಸುವ ಕೊರಮರು ಹೆಚ್ಚಾಗಿ ಹಂದಿ ಸಾಕಣಿಕೆಯಲ್ಲಿ ತೊಡಗುವುದೇ ಹೆಚ್ಚು. ಹಾಗೆ ಕೂದಲ ವ್ಯಾಪಾರ, ಪಿನ್ನು, ಸೂಜಿ, ಮುಂತಾದ ಸಣ್ಣ ಪುಟ್ಟ ವ್ಯಾಪಾರದಲ್ಲಿ ತೊಡಗಿರುವುದನ್ನು ಕಾಣಬಹುದು. ನಗರಗಳ ಕೊಳಚೆ ಪ್ರದೇಶ, ಬಯಲು ಜಾಗಗಳಲ್ಲಿ ಗುಡಿಸಲುಗಳನ್ನು ರಚಿಸಿಕೊಂಡು ನೆಲೆಸಿದ್ದಾರೆ. ೨೦೦೧ ರ ಜನಗಣತಿ ಪ್ರಕಾರ ನಗರಪ್ರದೇಶದಲ್ಲಿ ನೆಲೆಸಿರುವ ಕೊರಮರ ಜನಸಂಖ್ಯೆಯು ಒಟ್ಟು

೫೧,೫೩೩. ಇದರಲ್ಲಿ ಪುರುಷರು ೨೬,೦೬೪. ಮಹಿಳೆಯರು ೨೫,೪೬೯ ಎಂದಿದೆ. ೨೦೦೭ರ ಸಮೀಕ್ಷೆಯಲ್ಲಿ ನಗರದ ಕೊರಮರ ಜನಸಂಖ್ಯೆಯು ಶೇ.೪೨.೯೯ ರಷ್ಟಿರುವುದು ಕಂಡುಬಂದಿದೆ.

ಕೋಷ್ಟಕ : ೨.೫ ಕೊರಮರ ಗ್ರಾಮೀಣ ಮತ್ತು ನಗರ ಜನಸಂಖ್ಯೆ (೨೦೦೧)

| ಕ್ರ ಸಂ | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ಗ್ರಾಮೀಣ | ೫೭೪೫೮ | ೫೫೯೮೮ | ೧೧೩೪೪೬ |
| ೨. | ನಗರ | ೨೬೦೬೪ | ೨೫೪೬೯ | ೫೧೫೩೩ |
| | ಒಟ್ಟು | ೮೩೫೨೨ | ೮೧೪೫೭ | ೧೬೪೯೭೯ |

ಕೋಷ್ಟಕ : ೨.೬ ಸಮೀಕ್ಷೆಗೊಳಪಟ್ಟ ಕೊರಮರ ಗ್ರಾಮೀಣ ಮತ್ತು ನಗರ ಜನಸಂಖ್ಯೆ ಪ್ರಮಾಣ (೨೦೦೭)

| ಕ್ರ.ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧. | ಗ್ರಾಮೀಣ | ೫೬.೮೮ | ೫೭.೧೬ | ೫೭.೦೧ |
| ೨. | ನಗರ | ೪೩.೧೨ | ೪೨.೮೪ | ೪೨.೯೯ |

**ಪ್ರಸಾರ ನೆಲೆಗಳು**

ಕೊರಮರು ಇಂದು ಭಾರತದಾದ್ಯಂತ ಪಸರಿಸಿದ್ದಾರೆ. ಕೊರಮರನ್ನು ಕುರಿತು "ದಕ್ಷಿಣ ಭಾರತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವ ಸಮುದಾಯದವರು 'Dolichocephalic Leptorrhine' ವಂಶಜರು. ಇವರು ಸಾಧಾರಣ ಎತ್ತರದ ನಸ್ಯ ಬಣ್ಣದ ತೆಳು ಛಾಯೆಯುಳ್ಳ ಚರ್ಮ ಹೊಂದಿದವರು. ಅನೇಕ ರೀತಿಯಲ್ಲಿ ಆದಿವಾಸಿಗಳೊಂದಿಗೆ, ಗುಡ್ಡಗಾಡು ಜನತೆಯೊಂದಿಗೆ ಸಮ್ಮಿಶ್ರಣ ಹೊಂದಿದ Brachycephalic Leptorrhine ಇವರ ಪ್ರಭಾವವು ಕನ್ನಡ ಮತ್ತು ತಮಿಳು ಭಾಷೆಯನ್ನಾಡುವ ಸಮುದಾಯಗಳಲ್ಲಿ ಕಂಡುಬಂದಿದೆ. ಇತಿಹಾಸ ಪೂರ್ವದಲ್ಲಿಯೇ ಈ Brachycephalic ಸಮುದಾಯವು ಭಾರತದ ವಾತಾವರಣಕ್ಕೆ ತುಂಬಾ ಸರಿಹೊಂದಬಹುದೆಂದು ಮಾನವ ವಿಜ್ಞಾನಿ ಡಾ. ಪಡ್ಸನ್ ಅಭಿಪ್ರಾಯ ಪಡುತ್ತಾರೆ"(ಧೂಪದ ಎಂ.ಟಿ.: ೬೧) ಎಂಬುದರ ಹಿನ್ನೆಲೆಯಲ್ಲಿ ವಿಚಾರ ಮಾಡಿದ ಎಂ ಟಿ ಧೂಪದ ಅವರು ಕನ್ನಡ ನಾಡಿನ ಆದಿವಾಸಿಗಳ ಹೆಸರನ್ನು ಹೇಳುವಾಗ "ಆಂಧ್ರ ಕರ್ನಾಟಕದ ಕೊರಮರು ಮತ್ತು ಕರ್ನಾಟಕದ ಕೊರಚ, ಕೊರಮರು...(ಧೂಪದ ಎಂ.ಟಿ: ೬೧)ಎಂದು ನಮೂದಿಸಿರುವರು. ಇದರಿಂದ ಕರ್ನಾಟಕ ಮತ್ತು ಆಂಧ್ರಕ್ಕೆ ಬಹಳ ಹಿಂದೆಯೇ ಈ ಜನ ವಲಸೆ ಬಂದಿದ್ದಾರೆ ಎಂಬುದು ತಿಳಿದುಬರುತ್ತದೆ.


ಕರ್ನಾಟಕ
ಕೊರಮ ಬುಡಕಟ್ಟುಗಳ ನೆಲೆಗಳು
ಬೀದರ
ಗುಲಬರ್ಗಾ
ಬಿಜಾಪುರ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಬೆಂಗಳೂರು ನಗರ
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ
ಜನಸಂಖ್ಯೆ ಪ್ರಮಾಣ
● ೧೦೦ ರ ಒಳಗೆ
⊙ ೧೦೧ - ೫೦೦
○ ೫೦೧ - ೧೦೦೦
♦ ೧೦೦೧ - ೫೦೦೦
✧ ೫೦೦೧ - ೮೦೦೦
✪ ೮೦೦೧ - ೧೦೦೦೦
★ ೧೦೦೦೦ ರ ಮೇಲ್ಪಟ್ಟು

ದಕ್ಷಿಣ ಭಾರತದಲ್ಲಿ ದ್ರಾವಿಡ ಭಾಷೆಯನ್ನಾಡುವ ಜನತೆಯನ್ನು ದ್ರಾವಿಡರೆಂದು ಗುರುತಿಸಲಾಯಿತು. ಇನ್ನು ಕೆಲವು ವಿದ್ವಾಂಸರು ಜನತೆಯ ಮೂಗು, ಕೂದಲನ್ನು ಪರೀಕ್ಷಿಸಿ ಇಲ್ಲಿಯ ಜನಾಂಗ ಆದಿವಾಸಿಗಳು ಎಂದು ಗುರುತಿಸಿದ್ದಾರೆ(ಧೂಪದ ಎಂ ಟಿ: ೬೧)ತಮಿಳಿನ ಪ್ರಾಚೀನ ಕಾವ್ಯ ಶಿಲಪ್ಪಾಧಿಕಾರಮ್‌ನಲ್ಲಿ ಅಲೆಮಾರಿ ಜನಾಂಗದ ಸ್ತ್ರೀಯರು ಕಣಿ ಹೇಳುವ ಸಲುವಾಗಿ ಪಕ್ಕದ ಕಾಡಿನಿಂದ ಬರುವ ವರ್ಣನೆ ಇದೆ. ಪ್ರಾಯಶಃ ಕೊರಮ ಮಹಿಳೆಯರನ್ನೇ ಈ ಕಾವ್ಯದಲ್ಲಿ ವರ್ಣಿಸಿರಬಹುದು ಎನಿಸುತ್ತದೆ. ಪ್ರಾಯಶಃ ಕೊರಮ ಸಮುದಾಯ ಅನಾದಿಕಾಲದಿಂದಲೂ ತಮಿಳುನಾಡಿನ ಕಾಡುಗಳಲ್ಲಿ ನೆಲೆಸಿದ್ದ ಕಣಿ ಹೇಳುವ ಒಂದು ಪಂಗಡವೆಂದು ತಿಳಿದುಬರುತ್ತದೆ.

ಕೊರಮರು ಬಹುಮಟ್ಟಿಗೆ ಭರತಖಂಡದ ಪಶ್ಚಿಮ ಭಾಗದಲ್ಲಿಯೇ ವಿಶೇಷವಾಗಿ ವ್ಯಾಪಿಸಿರುವಂತಿದೆ. ಈ ಸಮುದಾಯದವರನ್ನು ಒಮ್ಮೊಮ್ಮೆ ಎರಕುಲರು ಎಂದು ಕರೆಯುವುದುಂಟು. ಈಗ ಉಪಲಬ್ಧವಿರುವ ಸಾಮಗ್ರಿಗಳನ್ನೆಲ್ಲ ಪರಿಶೀಲಿಸಿದರೆ ಈ ಜಾತಿ ಸೂಚಕ ಮೂಲರೂಪ ತಮಿಳಿನಲ್ಲಿ ಬಳಕೆಯಿರುವ ಕೆಲವು ಪದಗಳಲ್ಲಿ ಹುದುಗಿರಬೇಕೆನಿಸುತ್ತದೆ(ಕನ್ನಡ ವಿಶ್ವಕೋಶ:ಸಂಪುಟ–೫: ೩೭೧). ಕೊರಮರು ತಮಿಳು ನಾಡಿನ ಗುಡ್ಡಗಾಡುಗಳಲ್ಲಿ ಬದುಕುತ್ತಿದ್ದ ಮೂಲ ನಿವಾಸಿಗಳು ಎಂಬುದು ಖಚಿತ ವಾಗುತ್ತದೆ. ಬಿ ಎ ಮಲ್ಲಾಪುರ ಅವರು ಜಾನಪದ ಸಾಹಿತ್ಯ ದರ್ಶನ –೬ರಲ್ಲಿ ಕೊರಮ ಬುಡಕಟ್ಟು ದಕ್ಷಿಣ ಮೂಲದ ಸಮುದಾಯ ಎಂಬುದಂತೂ ನಿಜ ಎಂದು ಮೇಲಿನ ವಿಷಯಕ್ಕೆ ಒತ್ತು ಕೊಟ್ಟಿದ್ದಾರೆ.

ಈ ಬುಡಕಟ್ಟಿನ ಜನ ಹೆಚ್ಚಾಗಿ ದಕ್ಷಿಣ ಭಾರತದಲ್ಲಿ ವಾಸವಾಗಿದ್ದರು. ಆರ್ಯರು ಭಾರತಕ್ಕೆ ವಲಸೆ ಬರುವುದಕ್ಕಿಂತ ಮುಂಚೆ ದ್ರಾವಿಡರು, ಕೋಲರು ಮೂಲ ಪುರುಷ ರಾಗಿದ್ದಂತೆ ಕುರುವರು ಸಹ ಭಾರತದ ಮೂಲನಿವಾಸಿಗಳು ಎನಿಸುತ್ತದೆ. ಆರ್ಯ ಸಂಪರ್ಕ ಬೆಳೆದಂತೆ ಹಲವರು ಸಣ್ಣಪುಟ್ಟ ವ್ಯಾಪಾರಗಳಲ್ಲಿ ನಿರತರಾಗಿದ್ದರು. ಮತ್ತೆ ಕೆಲವರು ಭೂಮಾತೆಯನ್ನು ನಂಬಿದರು. ಊರುಗಳಲ್ಲಿ ನೆಲಸದೆ ಕೆಲವರುಜೀವನಕ್ಕಾಗಿ ಅಲೆಮಾರಿಗಳಾಗಿಪಂಚಿಹೋದರು(ಶ್ಯಾಮಪ್ರಸಾದ ಜೂಲೈ:೧೯೮೩) ಎಂದು ತಿಳಿಸುತ್ತಾರೆ.

ಭುಜೇಂದ್ರ ಮಹೀಷವಾಡಿಯವರು ಕೊರವರ ಮೂಲದ ಬಗೆಗೆ ಹೇಳಿರುವ ಮಾತುಗಳು ಗಮನಾರ್ಹವಾಗಿವೆ. ಭಾಮಾಕಥೆ, ಕೊರವಂಜಿ ಕಥೆಗಳು ನಮ್ಮಲ್ಲಿ ತಮಿಳು ನಾಡಿನಿಂದ ರಾಮಾನುಜಾಚಾರ್ಯರ ಜೊತೆಯಲ್ಲಿಯೇ ಪ್ರವೇಶಿಸಿದಂತೆ ತೋರುತ್ತದೆ. ಕೊರವಂಜಿ ಪಾತ್ರ ಸೃಷ್ಟಿ ಕನ್ನಡ ನೆಲದ್ದಲ್ಲ, ಆಂಧ್ರ ಮತ್ತು ತಮಿಳು ನಾಡಿನಿಂದಲೇ ನಮ್ಮಲ್ಲಿಗೆ ಬಂದು ಪ್ರಸಿದ್ಧಿ ಪಡೆಯಿತು(ಎಜಾನಪದ ಸಾಹಿತ್ಯ ದರ್ಶನ – ೩:೨೨೩) ಆಂಧ್ರದ ಕೊರಮರ ಮೂಲವು ತಮಿಳುನಾಡು ಎಂಬ ಬಗೆಗೆ ಮಾಹಿತಿ ಇದರಿಂದ ದೊರೆಯುತ್ತದೆ.

ಎಚ್ ವಿ ನಂಜುಂಡಯ್ಯ ಮತ್ತು ಅನಂತಕೃಷ್ಣ ಐಯ್ಯರ್ ಅವರುಗಳ ಅಭಿಪ್ರಾಯದಂತೆ "The Koravas or Koramas speak Tamil, Telugu or Canarese, according to the localities in which they live. But in communicating among themselves, the Koracvas and yarukulas speak a corrupt polyglot in which the words derived from different languages bear little resemblance. The words appear to beong to the three languages above mentioned" (The Mysore Tribes and Castes, Vol-III: 584). ಕೊರಮರು ಮಾತನಾಡುವ ಭಾಷೆ ಮತ್ತು ಆ ಭಾಷೆಯ ಶಬ್ದಗಳು ಇತರೆ ದ್ರಾವಿಡ ಭಾಷೆಗಳಿಂದ ಬಂದಿರುವ ಬಗ್ಗೆ ತಿಳಿಸುತ್ತಾರೆ. ಆದರೆ ಇದು ತಮಿಳಿನ ಮೂಲಭಾಷೆ ಎಂಬುದನ್ನು ತೆಗೆದುಹಾಕುವಂತಿಲ್ಲ.

ಸ್ಟೂಅರ್ಟ್ ಎಚ್ ವಿ ಅವರ ಪ್ರಕಾರ "In the Telugu country they are called yerukala vandalu or Korachavandlu, but they always speak of themselves as kurru........" (Madras Census Report:1891:440) ಎಂದು ಉಲ್ಲೇಖಿಸಿದ್ದಾರೆ. ಈ ಹೇಳಿಕೆಯನ್ನು ಪರೀಶಿಲಿಸಿದರೆ ಆಂಧ್ರದಲ್ಲಿನ ಕೊರಮರನ್ನು ಬೇರೆ ಹೆಸರಿನಿಂದ ಗುರುತಿಸುತ್ತಿದ್ದುದು ಅಲ್ಲದೆ, ಕುರು ಭಾಷೆಯನ್ನು ಮಾತನಾಡುತ್ತಿದ್ದ ಬಗ್ಗೆ ತಿಳಿಯುತ್ತದೆ. 'ಕುರು' ಎಂಬುದು ಜಾತಿ ಸೂಚಕವಾದ ಶಬ್ದ, ಇದೇ ಅಂಧ್ರದಲ್ಲಿ ಭಾಷಾ ಸೂಚಕ ಶಬ್ದವಾಗಿರುವುದು ಕಂಡುಬರುತ್ತದೆ. ಕುರು ಶಬ್ದ ಇವರ ಮೂಲ ನೆಲೆಯನ್ನು ಮತ್ತು ಅವರ ಮಾತೃಭಾಷೆಯನ್ನು ನಿರ್ದೇಶಿಸುತ್ತದೆ.

ದಕ್ಷಿಣ ಭಾರತದಲ್ಲಿ ಆಚರಣೆಯಲ್ಲಿದ್ದ ಈ ಕೋವಾಡ್ ಪದ್ಧತಿ ಕೇರಳ ಮತ್ತು ಕರ್ನಾಟಕದಲ್ಲಿ ನೆಲೆಸಿರುವ ಕೊರಮರಲ್ಲಿ ಮಾತ್ರ ಕಂಡು ಬಂದಿರುವುದನ್ನು ನೋಡಿದರೆ ಇವರು ಒಂದೇ ಮೂಲದಿಂದ ಚದುರಿದವರು ಎಂಬುದು ತಿಳಿಯುತ್ತದೆ. ಆದರೆ ಬೊಂಬಾಯಿ ಪ್ರಾಂತ್ಯದಲ್ಲಿನ ಕೊರಮರನ್ನು ಕುರಿತು ಬರೆದ ಆರ್ ಇ ಎಂಥೋವನ್ ಅವರು "No evidence is forth coming of this practice prevailing in the Bombay presidency" (The Castes and Tribes of Bombay:Vol-II:269) ಎಂದಿದ್ದಾರೆ. ಮತ್ತು ದಕ್ಷಿಣ ಭಾರತದಲ್ಲಿನ ಕೋವಾಡ್ ಬಗೆಗೆ ಇ ಥರ್ಸ್‌ಟನ್ ಅವರ ಮಾತುಗಳನ್ನು ಉಲ್ಲೇಖಿಸಿದ್ದಾರೆ. ಬೊಂಬಾಯಿ ಪ್ರಾಂತ್ಯದ ಕೊರಮರು ತಾವು ಬಂದು ನೆಲೆಸಿದ ಪ್ರದೇಶದ ಸಾಮಾಜಿಕ ಬಂಧನಗಳಿಗೊಳಗಾದಾಗ ಕಾರಣಾಂತರದಿಂದ ಈ ಪದ್ಧತಿಯನ್ನು ಕೈಬಿಟ್ಟಿರುವ ಸಾಧ್ಯತೆಗಳೇ ಹೆಚ್ಚು.

ಕುಟುಂಬ ಗಾತ್ರ

ಕೊರಮ ಕುಟುಂಬಗಳು ಗುಂಪು ಗುಂಪಾಗಿ ನೆಲೆಸುತ್ತವೆ. ಇವರಲ್ಲಿ ಅವಿಭಕ್ತ ಕುಟುಂಬಗಳು ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದರೂ ಇಂದು ಅವುಗಳ ಸ್ಥಾನವನ್ನು

ವಿಭಕ್ತ ಕುಟಂಬಗಳು ಆಕ್ರಮಿಸಿಕೊಂಡಿವೆ. ಇಲ್ಲಿ ೧ ರಿಂದ ೪ ರಷ್ಟು ಸಂಖ್ಯೆಯಲ್ಲಿ ಇರುವ ಸದಸ್ಯರ ಕುಟುಂಬಗಳನ್ನು ಚಿಕ್ಕ ಗಾತ್ರದ ಕುಟುಂಬಗಳೆಂದು ೪ ರಿಂದ ೬ರ ಸಂಖ್ಯೆಯಲ್ಲಿರುವ ಸದಸ್ಯರ ಕುಟುಂಬಗಳನ್ನು ಮಧ್ಯಮ ಗಾತ್ರದ ಕುಟುಂಬಗಳೆಂದು ೬ ಕ್ಕಿಂತ ಮೇಲ್ಪಟ್ಟು ಜನಸಂಖ್ಯೆ ಇರುವ ಕುಟುಂಬಗಳನ್ನು ದೊಡ್ಡ ಗಾತ್ರದ ಕುಟುಂಬಗಳೆಂದು ಪರಿಗಣಿಸಲಾಗಿದೆ. ಇಲ್ಲಿ ಸಮೀಕ್ಷೆಗೊಳಪಟ್ಟ ಕೊರಮರ ಕುಟುಂಬಗಳ ಗಾತ್ರವು ಸರಾಸರಿ ೫.೧೨ ಇದೆ ರಾಯಚೂರು ಜಿಲ್ಲೆಯಲ್ಲಿ ದೊಡ್ಡ ಗಾತ್ರದ ಕುಟುಂಬ ಗಳು ಕಂಡುಬರುತ್ತವೆ. ಹಾಗೆ ಬಳ್ಳಾರಿಯಲ್ಲಿ ಚಿಕ್ಕ ಗಾತ್ರದ ಕುಟುಂಬಗಳು ಕಂಡು ಬರುತ್ತವೆ. ಇನ್ನುಳಿದ ಬೆಂಗಳೂರು, ಬೆಳಗಾವಿ, ಬೀದರ,ಬಿಜಾಪುರ, ಗುಲಬರ್ಗಾ, ಕೊಪ್ಪಳ, ಮೈಸೂರುಗಳಲ್ಲಿ ಮದ್ಯಮ ಗಾತ್ರದ ಕುಟುಂಬಗಳು ಕಂಡುಬರುತ್ತವೆ.

**ಕೋಷ್ಟಕ: ೨.೭ ಸಮೀಕ್ಷೆಗೊಳಪಟ್ಟ ಕೊರಮರ ಕುಟುಂಬಗಳ ಗಾತ್ರ (೨೦೦೭)**

| ಸಂ. | ಜಿಲ್ಲೆ | ಕುಟುಂಬಗಾತ್ರ |
|---|---|---|
| ೧ | ಬೆಂಗಳೂರು | ೪.೪೬ |
| ೨ | ಬಳ್ಳಾರಿ | ೩.೫೩ |
| ೩ | ಬೆಳಗಾವಿ | ೪.೯೩ |
| ೪ | ಬೀದರ | ೪.೪೪ |
| ೫ | ಬಿಜಾಪುರ | ೫.೦೫ |
| ೬ | ಗುಲಬರ್ಗಾ | ೫.೮೬ |
| ೭ | ಕೊಪ್ಪಳ | ೫.೭೭ |
| ೮ | ಮೈಸೂರು | ೪.೪೧ |
| ೯ | ರಾಯಚೂರು | ೬.೧ |
| | | ೫.೧೨ |

**ಲಿಂಗಾನುಪಾತ**

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗಾನುಪಾತವಾಗಿರುತ್ತದೆ. ಕೊರಮರಲ್ಲಿ ೧೦೦೦ ಪುರುಷರಿಗೆ ಸರಾಸರಿ ಮಹಿಳೆಯರ ಪ್ರಮಾಣವು ೮೯೮ರಷ್ಟಿದೆ. ಅಂದರೆ ಪುರುಷ ಹಾಗೂ ಮಹಿಳೆಯರ ಮಧ್ಯ ೧೦೨ರಷ್ಟು ಅಂತರವಿರುವುದು ಮುಂದಿನ ಕೋಷ್ಟಕ ೨.೮ ಕಂಡುಬರುತ್ತದೆ.

**ಕೋಷ್ಟಕ: ೨.೮ ಸಮೀಕ್ಷೆಗೊಳಪಟ್ಟ ಕೊರಮರ ಲಿಂಗಾನುಪಾತ (೨೦೦೭)**

| ಸಂ. | ಜಿಲ್ಲೆ | ಲಿಂಗಪ್ರಮಾಣ |
|---|---|---|
| ೧ | ಬೆಂಗಳೂರು | ೮೭೦ |
| ೨ | ಬಳ್ಳಾರಿ | ೮೫೪ |
| ೩ | ಬೆಳಗಾವಿ | ೮೫೦ |
| ೪ | ಬೀದರ | ೮೫೭ |
| ೫ | ಬಿಜಾಪುರ | ೧೦೪೨ |
| ೬ | ಗುಲಬರ್ಗಾ | ೯೧೨ |
| ೭ | ಕೊಪ್ಪಳ | ೧೦೨೬ |
| ೮ | ಮೈಸೂರು | ೮೨೯ |
| ೯ | ರಾಯಚೂರು | ೮೪೩ |
| | | ೮೯೮ |

ಸಮೀಕ್ಷೆಗೊಳಪಡಿಸಿದ ಕೊರಮರಲ್ಲಿ ಬಿಜಾಪುರ, ಕೊಪ್ಪಳಗಳಲ್ಲಿ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣವೇ ಹೆಚ್ಚಾಗಿರುವುದು ಕಂಡುಬರುತ್ತದೆ. ಇನ್ನುಳಿದ ಗುಲಬರ್ಗಾ, ಬೆಂಗಳೂರು, ಬೀದರ, ಬಳ್ಳಾರಿ, ಬೆಳಗಾವಿ, ರಾಯಚೂರು, ಮೈಸೂರುಗಳಲ್ಲಿ ಮಹಿಳೆಯರ ಪ್ರಮಾಣ ಪುರುಷರಿಗಿಂತ ಕಡಿಮೆ ಇದೆ.

**ವಯೋಗುಂಪು**

ಸಮೀಕ್ಷೆಗೊಳಪಟ್ಟ ಕೊರಮರನ್ನು ವಯಸ್ಸಿಗನುಗುಣವಾಗಿ ಐದು ಗುಂಪುಗಳನ್ನಾಗಿ ವಿಂಗಡಿಸಲಾಗಿದೆ. ಯಾವುದೇ ಸಮುದಾಯದ ಆರ್ಥಿಕ ಹಾಗೂ ಶೈಕ್ಷಣಿಕ ಅಂಶಗಳನ್ನು ಅರಿಯಲು ಆ ಸಮುದಾಯದ ಜನರ ವಯೋಗುಂಪುಗಳನ್ನು ನೋಡುವುದು ಅಗತ್ಯವಾಗಿದೆ.

**ಕೋಷ್ಟಕ: ೨.೯**

**ಸಮೀಕ್ಷೆಗೊಳಪಟ್ಟ ಕೊರಮರ ವಯೋ ಗುಂಪುವಾರು ಜನಸಂಖ್ಯೆ (೨೦೦೭)**

| ವಯೋ ಗುಂಪು | ಪುರುಷ | ಮಹಿಳೆ | ಒಟ್ಟು |
|---|---|---|---|
| ೦-೪ | ೨೪೫ | ೨೩೯ | ೪೮೪ |
| ೫-೧೭ | ೭೫೫ | ೬೩೪ | ೧೩೮೯ |
| ೧೮-೪೦ | ೮೮೦ | ೮೪೧ | ೧೭೨೧ |
| ೪೧-೬೦ | ೨೮೮ | ೨೧೬ | ೫೦೪ |
| ೬೦+ | ೭೨ | ೮೨ | ೧೫೪ |

ಈ ಅಂಶಗಳನ್ನು ಅರಿಯಲು ೪ರ ವಯೋಮಾನದ ಒಳಗಿನ ಮಕ್ಕಳ ಅಂಕಿ ಅಂಶಗಳನ್ನು ಕಲೆಹಾಕಲಾಗಿದೆ. ಈ ವಯೋಗುಂಪನ್ನು ಹೊರಗಿಟ್ಟು ಸಾಕ್ಷರತೆ ಪ್ರಮಾಣ ಅರಿಯಲು ಪ್ರಯತ್ನಿಸಲಾಗಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಈ ವಯೋಗುಂಪಿನ ಪ್ರಮಾಣ ೧೧.೩೮ ಇದೆ. ೫ ರಿಂದ ೧೭ರ ವಯೋಮಾನದವರನ್ನು ಸಾಕ್ಷರತೆಗೆ ಒಳಪಡುವ, ಆದರೆ ಉದ್ಯೋಗಕ್ಕೆ ಅರ್ಹವಲ್ಲದ ಗುಂಪೆಂದು ಪರಿಗಣಿಸಲಾಗಿದೆ. ಇವರ ಪ್ರಮಾಣವು ೩೨.೬೬ರಷ್ಟಿದೆ. ೧೮ ರಿಂದ ೪೦ರ ಗುಂಪನ್ನು ಸಂತಾನರ್ಹ, ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರ ಪ್ರಮಾಣವು(೪೦.೪೭) ಅತ್ಯಧಿಕವಾಗಿದೆ. ೪೧ ರಿಂದ ೬೦ ಗುಂಪನ್ನು ಅನುಭವಿ ಗುಂಪೆನ್ನಬಹುದು. ಇವರ ಪ್ರಮಾಣವು ೧೧.೮೫ಇದೆ. ಹಾಗೂ ೬೦ರ ಮೇಲ್ಪಟ್ಟ ವಯೋಮಾನದವರನ್ನು ಅವಲಂಬಿತ ಗುಂಪೆಂದು ಭಾವಿಸಲಾಗಿದೆ. ಇವರ ಪ್ರಮಾಣವು (೩.೬೨)ಅತ್ಯಲ್ಪವಾಗಿದೆ.

## ೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

**ಮನೆ, ಕೊಟ್ಟಿಗೆ, ಹಟ್ಟಿ, ಹಾಡಿ, ಎಲ್ಲೆಕಟ್ಟು**

ಬೆಟ್ಟ ಗುಡ್ಡಗಳೊಂದಿಗೆ ತಮ್ಮ ಬದುಕನ್ನು ರೂಢಿಸಿಕೊಂಡಿದ್ದ ಕೊರಮರು ನಾಡಿನೊಂದಿಗೆ ಸಂಪರ್ಕ ಹೊಂದಿದ ಮೇಲೆ ಕೆಲವರು ಅಲೆಮಾರಿಗಳಾಗಿಯೂ, ಇನ್ನೂ ಕೆಲವರು ಒಂದೇ ಕಡೆ ನೆಲೆ ನಿಂತು ನಾನಾ ಉದ್ಯೋಗಗಳನ್ನು ಕೈಕೊಂಡು ಜೀವನ ಸಾಗಿಸುತ್ತಾ ಬಂದಿರುವುದನ್ನು ಕಾಣಬಹುದು. ಇತರ ಸಮುದಾಯಗಳ ಪ್ರಭಾವ ಈ ಜನರ ಮೇಲಾದರೂ ತಮ್ಮ ಮೂಲ ಸಂಪ್ರದಾಯದ ಬೇರುಗಳು ಇನ್ನೂ ಉಳಿದುಕೊಂಡು ಬಂದಿವೆ. ಮೊದಮೊದಲು ಅಲೆಮಾರಿಗಳಾದ ಕೊರವರು ತಂಡೋಪ ತಂಡವಾಗಿ ಗುಡ್ಡ ಗಂವಾರಗಲ್ಲಿ ವಾಸಿಸುತ್ತಿದ್ದರು. ಕ್ರಮೇಣ ಊರಿನ ಗುಡಿ ಗುಂಡಾರಗಳಲ್ಲಿ, ಗಿಡಗಳ ಕೆಳಗೆ, ಶಾಲೆಯ ಪಕ್ಕದಲ್ಲಿ ತಮ್ಮ ಗುಡಾರ ಹೂಡಲು ಪ್ರಾರಂಭಿಸಿದರು. ಇಂದು ತಮಗೆ ಅನುಕೂಲವೆನಿಸಿದ ಊರಿನ ಪಕ್ಕದಲ್ಲಿ ತಾವು ಹೆಣೆದ ತಟ್ಟಿಯಿಂದ ಮನೆ ನಿರ್ಮಿಸಿಕೊಂಡು ನೆಲೆ ನಿಲ್ಲುತಿದ್ದಾರೆ. ಅನುಕೂಲವಿದ್ದವರು ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಕೊರವರು ನೆಲೆಸಿರುವ ಕೇರಿಗಳಿಗೆ ಕೊರವರ ಕೇರಿಗಳೆಂದು ಕರೆಯುವ ವಾಡಿಕೆಯಿದೆ. ಈ ಸಮುದಾಯದಲ್ಲಿ ಕಂಡುಬರುವ ಪ್ರಮುಖ ಪಂಗಡವಾದ ಕುಂಚಿಕೊರವರು ಕೆಲವೆಡೆ ಕೊರವಗೇರಿಯಲ್ಲಿಯೇ ನೆಲೆಸಿದ್ದರೆ ಕೆಲವರಿಗೆ ನಿಂತಿದ್ದೆ ನೆಲೆಯಾಗಿದೆ. ಎಲ್ಲಿ ತಮ್ಮ ಕೆಲಸಕ್ಕೆ ಪೊರಕೆ, ಹುಲ್ಲು ಸುಲಭವಾಗಿ ದೊರೆಯುತ್ತದೆಯೋ, ಎಲ್ಲಿ ತಮ್ಮ ಸಾಕು ಪ್ರಾಣಿಗಳಿಗೆ ಪುಕ್ಕಟೆಯಾಗಿ ಆಹಾರ ನೀರು ಸಿಕ್ಕುತ್ತದೆಯೋ ಅಲ್ಲಿ ಬಿಡಾರ ಬಿಡುತ್ತಾರೆ. ಊರ ಹೊರವಲಯದ ಬಯಲಿನಲ್ಲಿ ಇಲ್ಲವೆ ಹಳ್ಳಕೊಳ್ಳದ ಸಮೀಪದಲ್ಲಿಯೇ ಹೆಚ್ಚಾಗಿ ಇವರು ಬೀಡುಬಿಡುವುದುಂಟು. ಇವರ ವಸತಿ ತುಂಬಾ ಸರಳವಾದುದು. ಕೊಲ್ಲಾರಿ ಆಕಾರದಲ್ಲಿ ಬಿದಿರುಗಳನ್ನು ನಿಲ್ಲಿಸಿ ಮೇಲೆ ಸಿಂದಿ(ಈಚಲು) ಪೊರಕೆಯ ಚಾಪೆ ಇಲ್ಲವೇ ಹಳೆಯ ಕೌದಿ ಹೊದಿಸಿ ಹಗ್ಗ ಬಿಗಿದರೆ ಗುಡಾರ ಸಿದ್ಧವಾಗುತ್ತದೆ. ಈ ಊರು ಸಾಕೆಂದೆನಿಸಿದಾಗ ಮತ್ತೆ ಗುಡಾರವನ್ನು ಕಿತ್ತುಕೊಂಡು ಕತ್ತೆಯ ಮೇಲೆ ಹೇರಿಕೊಂಡು ಮುಂದಿನ ಊರಿಗೆ ಪ್ರಯಾಣ ಬೆಳೆಸುತ್ತಾರೆ.

### ಕ್ರಿಯಾವಿಧಿಯ ಸ್ಥಳಾವರಣ

ಕ್ರಿಯಾವಿಧಿಯ ಸ್ಥಳವನ್ನು ಮಹತ್ವದ ಸ್ಥಳವೆಂದು ಕೊರಮರು ಪರಿಗಣಿಸುವರು. ಅವರಲ್ಲಿ ಜೀವನಾವರ್ತನ ಸಂಸ್ಕಾರಗಳಾದ ಜನನದಿಂದ ಮರಣದವರೆಗೆ ನಡೆಯುವ ಸ್ಥಳವು ತನ್ನದೇಯಾದ ವೈಶಿಷ್ಟ್ಯವನ್ನು ಹೊಂದಿದೆ. ಇವರಲ್ಲಿ ಮುಖ್ಯವಾಗಿ ಮೂರು ರೀತಿಯ ಕ್ರಿಯಾವಿಧಿಯ ಸ್ಥಳಾವರಣಗಳನ್ನು ಗಮನಿಸಬಹುದು. ೧. ದೈವಗಳಿಗೆ ಸಂಬಂಧಿಸಿದ ಪವಿತ್ರ ಸ್ಥಳಾವರಣ ೨. ಬದುಕಿಗೆ ಸಂಬಂಧಿಸಿದ ಸಾಮಾನ್ಯ ಸ್ಥಳಾವರಣ ೩. ಸೂತಕಕ್ಕೆ ಸಂಬಂಧಿಸಿದ ಕಲುಷಿತ ಸ್ಥಳಾವರಣ.

೧. ಪ್ರತಿ ಕೊರವರ ಗುಡಾರ, ಗುಡಿಸಲು ಹಾಗೂ ಮನೆಗಳಲ್ಲಿ ದೈವಗಳಿಗೆ ಮೀಸಲಿರುವ ಸ್ಥಳವಿದೆ. ಅದಕ್ಕೆ ದೇವರ ಗೂಡೆಂದು ಕರೆಯುತ್ತಾರೆ. ಇವರಲ್ಲಿ ದೈವಗಳ ನ್ನಿಡುವ ಗೂಡು ಪವಿತ್ರ ಸ್ಥಳಾವರಣವಾಗಿ ಪರಿಣಮಿಸಿದೆ. ತಮ್ಮ ಮನೆಗಳಲ್ಲಿ ಅಡಿಗೆ ಮನೆಯ ಗೋಡೆಯ ಪೂರ್ವಕ್ಕೆ ಎದುರಾಗಿ ಒಂದು ಅಡಿ ಉದ್ದಗಲದ ಗೂಡು ಮಾಡಿ ಅದರಲ್ಲಿ ಸಗಣಿಯಿಂದ ಮಾಡಿದ ಗದ್ದುಗೆಯನ್ನು ತಯಾರಿಸಿ ಗದ್ದುಗೆಯ ಮೇಲೆ ದೀಪ ಇಟ್ಟು ಒಳ್ಳೆಣ್ಣೆ ಹಾಕಿ ಉರಿಸಿ, ಹೂವುಗಳಿಂದ ಪೂಜಿಸುತ್ತಾರೆ. ಈ ದೈವಗಳಿಗೆ ಹೆಚ್ಚಾಗಿ ಬುದುವಾರ ಮತ್ತು ಗುರುವಾರ ಬಿಟ್ಟು ಉಳಿದ ದಿನಗಳನ್ನು ವಾರದ ದಿನವಾಗಿ ಪೂಜೆ ಮಾಡುತ್ತಾರೆ. ಆದರೆಾರಾಧನಾ ಕ್ರಮದಲ್ಲಿ ಪ್ರಾದೇಶಿಕ ಭಿನ್ನತೆ ಕಂಡು ಬರುತ್ತದೆ. ಪೂಜಿಸುವ ದಿನದಂದು ಮನೆಯ ಪಾತ್ರೆಗಳನ್ನೆಲ್ಲ ತೊಳೆದು, ಮನೆಯನ್ನು ಸಾರಿಸಿ, ಕೆಲವರ ಮನೆಯಲ್ಲಿ ಎಲ್ಲರೂ ಸ್ನಾನಮಾಡಿ ಮಡಿಬಟ್ಟೆ ತೊಟ್ಟು ಪೂಜಿಸುತ್ತಾರೆ. ಕೆಲವು ಮನೆಗಳಲ್ಲಿ ಕೋಣೆಯಷ್ಟನ್ನೇ ಸಾರಿಸಿ ಯಾರಾದರೊಬ್ಬರು ಸ್ನಾನಮಾಡಿ ಪೂಜಿಸುವುದು ವಾಡಿಕೆ. ಕೆಲವರು ಅಂದು ಸಾಮಾನ್ಯವಾಗಿ ಮನೆಯಲ್ಲಿ ಮಾಂಸದ ಅಡುಗೆ ಮಾಡುವಂತಿಲ್ಲ. ಕೆಲವರು ಹಂದಿಯ ಮಾಂಸವನ್ನು ಮನೆಯ ಹೊರಭಾಗದಲ್ಲಿ ಮಾತ್ರ ಮಾಡುತ್ತಾರೆ. ಶುಚಿಯಿಲ್ಲದೆ ವ್ಯಕ್ತಿಗಳು ದೇವರನ್ನು ಮುಟ್ಟಿಸಿ ಕೊಳ್ಳುವಂತಿಲ್ಲ ಹಾಗೂ ಪೂಜೆ ಮಾಡುವಂತಿಲ್ಲ. ಕಾರಣ ದೈವವಿರುವ ಸ್ಥಳವು ಪವಿತ್ರತೆಯನ್ನು ಹೊಂದಿರುತ್ತದೆ. ಹಬ್ಬ ಹರಿದಿನಗಳಲ್ಲಿ ಹಾಗೂ ಹಲವು ಕ್ರಿಯಾವಿಧಿಗಳಲ್ಲಿ ಸಾರ್ವಜನಿಕವಾಗಿ ಬಳಸುವ ಸಾಮಾನ್ಯ ಸ್ಥಳವು ಕೂಡ ಪವಿತ್ರ ಸ್ಥಳಾವರಣವಾಗಿ ಮಾರ್ಪಾಡುತ್ತದೆ.

೨. ಬದುಕಿಗೆ ಸಂಬಂಧಿಸಿದ ಸಾಮಾನ್ಯ ಸ್ಥಳಾವರಣವು ದೈವಗಳಿಗೆ ಸಂಬಂಧಪಟ್ಟ ಪವಿತ್ರ ಸ್ಥಳಾವರಣಕ್ಕೂ ಹಾಗೂ ಸೂತಕಕ್ಕೆ ಸಂಬಂಧಪಟ್ಟ ಕಲುಷಿತ ಸ್ಥಳಾವರಣಕ್ಕೂ ಭಿನ್ನವಾಗಿದ್ದು ಸಾಮಾನ್ಯ ಸ್ಥಳಾವರಣವಾಗಿರುತ್ತದೆ. ದೈನಂದಿನ ಚಟುವಟಿಕೆಗಳಾದ ಊಟೋಪಚಾರ, ಸ್ನಾನ, ಶಯನ, ಇತ್ಯಾದಿ ಕಾರ್ಯಕ್ರಮಗಳು ಈ ಸ್ಥಳಾವರಣದಲ್ಲಿ ನಡೆಯುತ್ತವೆ. ಇಲ್ಲಿ ಶುಭಾಶುಭ ಶಕುನಗಳಿಗೆ ಅವಕಾಶವಿಲ್ಲ. ಇದು ಬದುಕಿಗೆ ಪ್ರಶಸ್ತವಾದ ಸ್ಥಳವಾಗಿದೆ.

೩. ಸೂತಕಕ್ಕೆ ಸಂಬಂಧಿಸಿದ ಕಲುಷಿತ ಸ್ಥಳಾವರಣವು ಭಯವನ್ನು ಹುಟ್ಟಿಸು ವಂಥದ್ದಾಗಿದೆ. ಸ್ತ್ರೀಯು ಮೈನೆರದಾಗ ಕೊಳೆಯಾಗಿರುವಳೆಂಬ ನಂಬಿಕೆ ಕೊರಮರಲ್ಲಿದೆ. ಇಂತಹ ಸಂದರ್ಭಗಳಲ್ಲಿ ಅವಳನ್ನು ಯಾರು ಮುಟ್ಟುವುದಿಲ್ಲ. ಮೈನೆರದ ಹೆಣ್ಣು ಮನೆಯ ಒಳಗೆ ಬರುವಂತಿಲ್ಲ. ಆಕೆಗಾಗಿ ಹೊರಗೆ ಅಂಗಳದಲ್ಲಿ ಒಂದು ಸೊಪ್ಪಿನ ಗುಡಿಸಲು ಹಾಕುತ್ತಾರೆ. ಮೈನೆರೆದ ಹೆಣ್ಣು ಐದು ದಿನವೂ ಗುಡಿಸಲಿನಲ್ಲಿ ಇರಬೇಕು. ಅವಳಿಗೆ ಪ್ರತ್ಯೇಕವಾಗಿ ಚಾಪೆ ಮತ್ತು ಹೊದಿಕೆಯನ್ನು ನೀಡುತ್ತಾರೆ. ಮೈನೆರೆದ ಗುಡಾರವು ಪ್ರಧಾನವಾಗಿ ಐದು ದಿನ ಕೊಳೆಯಾಗಿರುವುದು. ೫ನೇ ದಿನ ಗುಡಾರ ಸಾರಿಸಿ ಶುಚಿಗೊಳಿಸಿ ಮುಂದಿನ ಕ್ರಿಯಾವಿಧಿ ಮಾಡಿದ ಮೇಲೆ ಸೂತಕಕ್ಕೆ ಸಂಬಂಧಿಸಿದ ಕಲುಷಿತ ಸ್ಥಳಾವರಣವು ಸಾಮಾನ್ಯ ಸ್ಥಳಾವರಣವಾಗಿ ಮಾರ್ಪಾಡುತ್ತದೆ. ಕೊರಮರಲ್ಲಿ ವ್ಯಕ್ತಿ ಸತ್ತಾಗಲೂ ಸೂತಕಾಚರಿಸುವುದುಂಟು. ಸೂತಕದ ಸ್ಥಳಾವರಣವು ಕೊಳೆಯಾಗಿ ರುವುದೆಂದು ಅವರ ನಂಬಿಕೆಯಾಗಿದೆ. ಕಲುಷಿತ ಸ್ಥಳಾವರಣವನ್ನು ಸಾಮಾನ್ಯ ಸ್ಥಿತಿಗೆ ತರಲು ವಿಶಿಷ್ಟ ಕ್ರಿಯಾವಿಧಿಗಳು ಜರುಗುವವು.

## ಬ್ರಹ್ಮಾಂಡದ ಪರಿಕಲ್ಪನೆ

ಕೊರಮರು ಪುನರ್ಜನ್ಮದ ಕಲ್ಪನೆ ಹಾಗೂ ಸ್ವರ್ಗ ನರಕದ ಕಲ್ಪನೆಗಳನ್ನು ಹೊಂದಿದ್ದವ ರಾಗಿದ್ದಾರೆ. ಈ ಸಮುದಾಯದ ಪ್ರಕಾರ ಯಾವುದೇ ವ್ಯಕ್ತಿ ಸತ್ಕರ್ಮಗಳನ್ನು ಮಾಡಿದರೆ ಅವನು ಸತ್ತ ತರುವಾಯ ನೇರವಾಗಿ ಸ್ವರ್ಗಕ್ಕೆ ಹೋಗುತ್ತಾನೆ. ಅದರಂತೆ ಕೆಟ್ಟ ಕೆಲಸಗಳನ್ನು ಮಾಡಿದವನು ನರಕಕ್ಕೆ ಹೋಗುವನೆಂಬ ನಂಬಿಕೆ ಇದೆ. ಭೂಮಿಯ ಮೇಲೆ ಸ್ವರ್ಗಲೋಕ ಹಾಗೂ ಭೂಮಿಯ ಕೆಳಗೆ ನರಕಲೋಕವಿರುವುದೆಂದು ನಂಬುತ್ತಾರೆ. ಒಳ್ಳೆಯ ಕೆಲಸ ಮಾಡಿದವನು ಮುಂದಿನ ಜನ್ಮದಲ್ಲಿ ಒಳ್ಳೆಯವರ ಹೊಟ್ಟೆಯಲ್ಲಿ ಮನುಷ್ಯನಾಗಿ, ಹಾಗೆಯೇ ಕೆಟ್ಟ ಕೆಲಸಗಳನ್ನು ಮಾಡಿದವನು ವಿಷಜಂತುವಾಗಿ ಹುಟ್ಟುತ್ತಾನೆಂದು ಭಾವಿಸುತ್ತಾರೆ. ತಮ್ಮ ಕರ್ಮಗಳನ್ನು ದೇವರು ಪರೀಕ್ಷೆ ಮಾಡುವನೆಂದು ಹಾಗೂ ದೇವರು ನೆನೆದಾಗ ಕನಸಿನಲ್ಲಿ ಅಥವಾ ಯಾವುದೇ ರೂಪದಲ್ಲಿ ಸಮಸ್ಯೆಗಳಿಗೆ ಪರಿಹಾರ ಕಲ್ಪಿಸುವನೆಂದು ಅವರ ನಂಬಿಕೆಯಾಗಿದೆ ಈ ಹಿನ್ನೆಲೆಯಲ್ಲಿಯೆ ಕೊರಮರು ಪ್ರಕೃತಿಯ ಎಲ್ಲಾ ವಸ್ತುಗಳನ್ನು ಆರಾಧಿಸುವರು.

ಬ್ರಹ್ಮಾಂಡದ ಪರಿಕಲ್ಪನೆಯನ್ನು ಕುರಿತು ಕೊರಮರಲ್ಲಿ ಒಂದು ಕತೆ ಪ್ರಚಲಿತವಿದೆ. ಅದು ಈ ಕೆಳಗಿನಂತಿದೆ.

ಒಂದೂರಲ್ಲಿ ಒಬ್ಬ ಅಜ್ಜಿ ಇದ್ದಳು. ಅವಳಿಗೆ ಇಬ್ಬರು ಗಂಡು ಮಕ್ಕಳಿದ್ದರು. ಅವರ ಹೆಸರು ಸೂರ್ಯ, ಚಂದ್ರ ಎಂದು. ಒಂದು ದಿನ ಅವರ ಊರಲ್ಲಿ ಮದುವೆ ಯಿತ್ತು, ಮದುವೆ ಮನೆಯಲ್ಲಿ ವಿಶೇಷ ಊಟವಿತ್ತು. ಮುದುಕಿಯಾದ ಆಕೆಗೆ ಅಲ್ಲಿ ಊಟಕ್ಕೆ ಹೋಗಲು ಸಾಧ್ಯವಾಗದ್ದಕ್ಕೆ ಚಿಕ್ಕ ಮಗ ಚಂದ್ರನಿಗೆ ಕರೆದು ನೀನು ಮದುವೆಗೆ ಹೋಗಿ ಊಟ ಮಾಡಿಕೊಂಡು ಬಾ, ಬರುವಾಗ ನನಗಷ್ಟು ಊಟ ತೆಗೆದುಕೊಂಡು ಬಾ ಎಂದಳು. ಆದರೆ ಚಂದ್ರನು ತನಗೆ ಮಂದಿಯ ಮುಂದೆ ಊಟ ತೆಗೆದುಕೊಂಡು

ಬರಲು ಆಗುವುದಿಲ್ಲ. ನೀನೇ ಬೇಕಾದರೆ ಬಾ ಎಂದು ಹೇಳಿ ಮದುವೆಗೆ ಹೊರಟು ಹೋದ. ಅದೇ ವೇಳೆಗೆ ಅವಳ ಹಿರಿಯ ಮಗ ಸೂರ್ಯ ಬಂದು ಅವ್ವ, ತಮ್ಮ ಚಿಕ್ಕವನು ತಿಳಿವಳಿಕೆ ಕಡಿಮೆ. ಅವನ ಮೇಲೆ ಸಿಟ್ಟಾಗಬೇಡ. ನಾನು ಮದುವೆಗೆ ಹೋಗಿ ನಿನಗೆ ಊಟ ತೆಗೆದುಕೊಂಡು ಬರುತ್ತೇನೆ ಎಂದು ಹೇಳಿ ಮದುವೆಗೆ ಹೊರಟು ಹೋದ.

ಈ ಕಡೆ ಮುದುಕಿ ಮದುವೆಗೆ ಹೋದ ಹಿರಿಯ ಮಗ ಸೂರ್ಯ ಏನಾದರೂ ಮದುವೆಯಿಂದ ತಿನ್ನಲು ತರುತ್ತಾನೆಂದು ದಾರಿ ಕಾಯುತ್ತ ಗುಡಿಸಿಲ ಮುಂದಿನ ಕಟ್ಟೆಯ ಮೇಲೆ ಕುಳಿತು ದಾರಿ ಕಾಯುತ್ತಿದ್ದಳು. ಹಿರಿಯ ಮಗ ತರುತ್ತೇನೆ ಎಂದು ಹೇಳಿ ಹೋಗಿರುವುದರಿಂದ ಹಿರಿದಾದ ಆಸೆ ಹೊತ್ತು ಕುಳಿತಿದ್ದಳು. ಅದೇ ವೇಳೆ ಹಿರಿಯ ಮಗ ಮದುವೆ ಮುಗಿಸಿಕೊಂಡು ಎದುರಿಗೆ ಬಂದ. ಬರುತ್ತಿದ್ದ ಹಾಗೆ ತಾಯಿಯನ್ನು ನೋಡಿ ಅವನ ಎದೆ ಧಸಕ್ಕೆಂದಿತು. ಅವನಿಗೆ ಮದುವೆಯ ಊಟ ಮಾಡುವ ಆತುರದಲ್ಲಿ ತಾಯಿಗೆ ಹೇಳಿದ ಮಾತು ನೆನಪಾಗಿರಲಿಲ್ಲ. ತಾಯಿಯನ್ನು ನೋಡುತ್ತಲೇ ತಾಯಿಗೆ ಮದುವೆಯ ಮನೆಯಿಂದ ಊಟ ತರಲಿಲ್ಲವಲ್ಲ ಎಂದು ಕಳವಳಿಸತೊಡಗಿದನು. ತಾಯಿ ಎದುರಿಗೆ ಬಂದು ತಂದೇನಪ್ಪಾ ಮಗನೇ ಊಟ ಎಂದು ಕೇಳಿದಾಗ ಮರೆತುಬಂದೆನೆಂದು ಮುಖ ಕೆಳಗೆ ಮಾಡಿ ಹೇಳಿ ಹೊರಟುಹೋದ. ತಾಯಿಗೆ ಬಹಳ ನಿರಾಸೆಯಾಯಿತು. ಅದೇ ವೇಳೆಗೆ ಚಿಕ್ಕ ಮಗ ಚಂದ್ರ ಬಂದು ತಾಯಿಗೆ ನಿನ್ನ ಹಿರಿಯ ಮಗ ತರುತ್ತೇನೆ ಎಂದು ಹೇಳಿದ್ದ, ತಂದನೇನು ಊಟ ಎಂದು ವ್ಯಂಗ್ಯವಾಗಿ ಕೇಳಿದ. ಪಾಪ, ತಾಯಿಗೆ ಕರುಳು ಚುರುಕೆಂದಿತು. ಅವಮಾನ ವಾದಂತಾಗಿ ಕಟ್ಟೆಯ ಮೇಲೆ ಮುಖ ಕೆಳಗೆ ಮಾಡಿ ಕುಳಿತಳು.

ಆಗ ಮಗ ಚಂದ್ರಾಮನು ತಾಯಿಗೆ ಇರಲಿ ಉಡಿ ಒಡ್ಡು, ಮದುವೆ ಮನೆಯಿಂದ ಊಟ ತಂದಿದ್ದೇನೆ. ತಗಾ ಎಂದ. ಆಗ ಹೀಗೆಲ್ಲ ಮುದುಕಿಯನ್ನು ಹಂಗಿಸಬೇಡ ಮಗನೆ, ನಿಮ್ಮನ್ನ ಕೇಳದೆ ನಾ ಇನ್ನಾರನ್ನ ಕೇಳಲಿ ಹೇಳು ಅಂದಳು.ಆಗ ಚಂದ್ರಾಮ, ಇಲ್ಲವ್ವ ನಿಜವಾಗಿಯೂ ಊಟ ತಂದಿದ್ದೇನೆ ಉಡಿ ಒಡ್ಡು ಎನ್ನುತ್ತಾನೆ. ಅದಕ್ಕೆ ಅವರ ತಾಯಿ, ಅಲ್ಲಪ್ಪ ಬರಿಗೈಯಲ್ಲಿ ಬಂದಿದ್ದೀಯಾ, ಕೈಯಲ್ಲಿ ಏನೂ ಇಲ್ಲ, ತಮಾಷೆ ಮಾಡಬೇಡ ಮಗನೇ ಎನ್ನುತ್ತಾಳೆ. ಆಗ ಅವನು ನೀನು ಉಡಿಯನ್ನು ಮೊದಲು ಒಡ್ಡು, ಆಮೇಲೆ ನೋಡುವಿಯಂತೆ ಎನ್ನುತ್ತಾನೆ. ಮುದುಕಿ ಉಡಿ ಒಡ್ಡುತ್ತಾಳೆ. ಚಂದ್ರಾಮ ಮದುವೆಯ ಮನೆಯಿಂದ ತಾಯಿಗಾಗಿ ಊಟದ ಎಲ್ಲ ಪದಾರ್ಥಗಳನ್ನು, ತನ್ನ ಹತ್ತು ಕೈಬೆರಳಗಳ ಉಗುರಿನಲ್ಲಿ ಮುಚ್ಚಿಟ್ಟುಕೊಂಡು ತಂದಿರುತ್ತಾನೆ. ಅವನು ತಾಯಿಯ ಉಡಿಯಲ್ಲಿ ಉಗುರುಗಳನ್ನು ಜಾಡಿಸುತ್ತಾನೆ. ತಾಯಿಯ ಉಡಿ ತುಂಬುತ್ತದೆ. ತಾಯಿಗೆ ಬಹಳ ಅಂದರೆ ಬಹಳ ಖುಷಿಯಾಗುತ್ತದೆ. ಸಣ್ಣ ಮಗನ ಮೇಲೆ ಪ್ರೀತಿ ಉಕ್ಕಿಬರುತ್ತದೆ. ತರುತ್ತೇನೆಂದು ಆಸೆ ತೋರಿಸಿದ ಸೂರ್ಯ ತರಲಿಲ್ಲ, ತರುವುದಿಲ್ಲವೆಂದು ಹೇಳಿ ನೀನು ತಂದಿದ್ದೀಯ, ಈ ತಾಯಿಯ ಮನಸ್ಸಿಗೆ ಹೆಚ್ಚಿನ ಸಂತೋಷವನ್ನು ಮಾಡಿರುವೆ

ನೀನು ಯಾವತ್ತೂ ತಂಪತ್ತಿನಲ್ಲಿರು. ಜನರೆಲ್ಲ ನಿನ್ನ ನೆನೆಸಲಿ, ಮಾತಿಗೆ ತಪ್ಪಿದ ಸೂರ್ಯ ಬಿಸಲಲ್ಲಿರಲಿ, ಜನ ಅವನನ್ನು ಶಪಿಸಲಿ ಎಂದು ಹರಕೆ ಕೊಡುತ್ತಾಳೆ. ಅದಕ್ಕಾಗಿ ಸೂರ್ಯ ಬಿಸಿಲಿನಲ್ಲಿ ಚಂದ್ರ ತಂಪ್ಪೊತ್ತಿನಲ್ಲಿ ಇದ್ದಾರೆ. ಚಂದ್ರನಲ್ಲಿರುವ ಕಟ್ಟೆಯ ಮೇಲೆ ಆ ಮುದುಕಿ ಗಿಡದ ಬುಡದಲ್ಲಿ ಚಂದ್ರನೊಟ್ಟಿಗಿದ್ದಾಳೆ. ಅವರಿಬ್ಬರನ್ನೂ, ಭೂಮಿತಾಯಿ ದಿನಾಲೂ ನೋಡ್ತಾ ಕಾಲ ಕಳಿತಾಳೆ ಎಂದು ಹೇಳುತ್ತಾರೆ(ಮಾಹಿತಿ: ಶ್ರೀಮತಿ ಲಕ್ಷ್ಮೀ ಭೀಮರಾಯ ಮಾನ್ಪಡೆ ಬೇವಿನಹಳ್ಳಿ).

೪

# ಬಂಧುತ್ವ ಮತ್ತು ವಿವಾಹ

**ಮಾ**ನವನ ಬದುಕಿನಲ್ಲಿ ವಿವಾಹವೆನ್ನುವುದು ಪ್ರಮುಖ ಘಟ್ಟವಾಗಿದೆ. ಪ್ರತಿಯೊಂದು ಸಮುದಾಯವೂ ಬಂಧುತ್ವವನ್ನು ರೂಪಿಸಿಕೊಳ್ಳುವುದಕ್ಕೆ ಹಲವು ನೀತಿ ನಿಯಮಗಳನ್ನು ರಚಿಸಿಕೊಂಡಿರುತ್ತವೆ. ಅದಕ್ಕೆ ಕೊರಮ ಸಮುದಾಯವೂ ಹೊರತಲ್ಲ. ಕೊರಮ ಸಮುದಾಯದಲ್ಲಿ ವಿವಾಹ ಹಾಗೂ ಬಂಧುತ್ವದ ಸಂದರ್ಭದಲ್ಲಿ ಬೆಡಗು ಅತೀ ಪ್ರಮುಖ ಸ್ಥಾನವನ್ನು ಪಡೆದಿರುತ್ತವೆ. ಇಲ್ಲಿ ಕೊರಮರ ಬೆಡಗುಗಳು, ಅವರಲ್ಲಿ ಪ್ರಚಲಿತವಿರುವ ವಿವಾಹ ಕ್ರಮ, ಅವುಗಳ ವೈವಿಧ್ಯತೆಯನ್ನು ತಿಳಿಸಲಾಗಿದೆ.

**ಕುಲ, ಬೆಡಗು**

ಮುಖ್ಯವಾಗಿ ಸಾತಪಾಡಿ, ಕಾವಾಡಿ, ಎಂಬ ಎರಡು ಬೆಡಗುಗಳು ಇವರಲ್ಲಿವೆ. ಇವುಗಳಿಗೆ ಇವರು ಕುಲ ಎಂದು ಕರೆಯುವರು. ಆದರೆ ಮೈಸೂರು ಪ್ರದೇಶದಲ್ಲಿ ನಾಲ್ಕು ಬೆಡಗುಗಳು ಕಂಡುಬರುತ್ತವೆ. ಅವುಗಳೆಂದರೆ, ೧ ಸಾತಪಾಡಿ, ೨ ಕಾವಾಡಿ, ೩ ಮಾನಪಾಡಿ ಮತ್ತು ೪ ಮೇನ್ರಗುತ್ತಿ. ಈ ಬೆಡಗುಗಳ ಅರ್ಥ ಕಾಲಗರ್ಭದಲ್ಲಿ ನಶಿಸಿಹೋಗಿವೆ. ಆದರೂ ಸಹ ಈ ಬೆಡಗುಗಳನ್ನು ದೇವರ ಆರಾಧನೆಯ ಹಿನ್ನೆಲೆಯಲ್ಲಿ ವಿಂಗಡಿಸಬಹುದು. ಕೊರಮ ಸಮುದಾಯದವರು ತಿರುಪತಿ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆ ಮತ್ತು ಆರಾಧನೆಯನ್ನು ಮಾಡುತ್ತಿದ್ದರು ಎಂಬ ಪ್ರತೀತಿ ಇದೆ. ಈ ಸಮುದಾಯದಲ್ಲಿ ಸ್ವ ಬೆಡಗಿನವರನ್ನು ಬಿಟ್ಟು ಉಳಿದ ಎಲ್ಲಾ ಬೆಡಗಿನವರೊಂದಿಗೆ ವಿವಾಹ ಸಂಬಂಧ ಬೆಳೆಸುವ ಸಂಪ್ರದಾಯವನ್ನು ಇಟ್ಟುಕೊಂಡಿರುತ್ತಾರೆ.

**೧. ಸಾತಪಾಡಿ** : ಸಾತಪಾಡಿ ಬೆಡಗಿನವರು ದೇವರ ಮೂರ್ತಿಯನ್ನು ಸ್ವಚ್ಛಗೊಳಿಸಿ ಪ್ರತಿಮೆಯನ್ನು ಅಲಂಕಾರ ವಸ್ತುಗಳಿಂದ ಅಲಂಕರಿಸಿ ಸ್ವಾಮಿಯ ಸೇವೆ ಮಾಡುತ್ತಿದ್ದರು. ಈ ದೇವರನ್ನು ಅಲಂಕರಿಸುವುದಕ್ಕೆ ತಮಿಳಿನಲ್ಲಿ ಸಾತಪಾಡಿ ಎಂದು ಹೆಸರು ಮತ್ತು ಸಂಸ್ಕೃತದಲ್ಲಿ ಇದಕ್ಕೆ ಸಮರ್ಪಣೆ ಎಂಬ ಅರ್ಥವಿದೆ. ಸಾತಪಾಡಿ ಬೆಡಗಿನವರಿಗೆ ಎಕ್ಕೆಗಿಡ ಅಥವಾ ಕಕ್ಕೆಗಿಡ ಪವಿತ್ರವಾದದ್ದು, ಆ ಗಿಡವನ್ನು ಅವರು ಪೂಜಿಸುವುದು ವಾಡಿಕೆ.

**೨. ಕಾವಾಡಿ** : ಈ ಬೆಡಗಿನವರು ದೇವರಿಗೆ ಹರಕೆ ಮತ್ತು ಕಪ್ಪಕಾಣಿಕೆಗಳನ್ನು ಕಾವಾಡಿ ಎಂಬ ಹಡ್ಡೆಗಳಲ್ಲಿ ಹೆಗಲ ಮೇಲೆ ಇಟ್ಟುಕೊಂಡು ಹೋಗಿ ದೇವರಿಗೆ

ಸಮರ್ಪಿಸುತ್ತಿದ್ದರು. ಒಂದು ಬಿದಿರಿನ ಕೋಲಿಗೆ ಎರಡು ಕಡೆಗಳಲ್ಲಿ ಹರಕೆಗಳನ್ನು ಬುಟ್ಟಿಗಳಲ್ಲಿ ತೂಗು ಹಾಕಿಕೊಂಡು ಹೆಗಲ ಮೇಲೆ ಹೊತ್ತುಕೊಂಡು ಹೋಗಿ ಸ್ವಾಮಿಗೆ ಅರ್ಪಿಸುತ್ತಿದ್ದರು. ಇವರಿಗೆ ಬೇವಿನ ಮರ ಪವಿತ್ರವಾದದ್ದು. ಬೇವಿನ ಮರದ ಬುಡದಲ್ಲಿ ತಮ್ಮ ಮನೆ ದೇವತೆಗಳನ್ನು ಪ್ರತಿಷ್ಠಾಪಿಸಿ ಆರಾಧಿಸುವ ವಾಡಿಕೆ ಇವರಲ್ಲಿದೆ.

೩. **ಮಾನಪಾಡಿ ಬೆಡಗು:** ಈ ಬೆಡಗಿನವರು ದೇವರನ್ನು ಕುರಿತು ಭಕ್ತಿಯಿಂದ ಭಜನೆ ಮಾಡುವುದು, ಹಾಡುವುದು, ಹಾಡಿ ದೇವರನ್ನು ಸ್ತುತಿಸುವುದು ಇವರ ಪ್ರಮುಖ ಕರ್ತವ್ಯವಾಗಿತ್ತು. ಇವರಿಗೆ ಸಂಗೀತ ಸಾಹಿತ್ಯ ಮತ್ತು ನಾಟ್ಯ ಕಲೆಗಳಲ್ಲಿ ಆಳವಾದ ಪರಿಜ್ಞಾನವಿತ್ತು. ಸಂಗೀತ, ನಾಟ್ಯ ಕಲೆಗಳ ಪರಂಪರೆ ಈ ಬೆಡಗಿನವರಿಂದ ಕೊರಮದಲ್ಲಿ ಅಸ್ತಿತ್ವಕ್ಕೆ ಬಂದಿದೆ ಎಂದರೆ ತಪ್ಪಾಗಲಾರದು.

೪. **ಮೇನ್ರಗುತ್ತಿ ಬೆಡಗು:** ಕೊರಮ ಸಮುದಾಯದ ನಾಲ್ಕನೆಯ ಬೆಡಗಿದು. ಇವರು ದೇವರಿಗೆ ಪುಷ್ಪಗಳಿಂದಲೂ ಮತ್ತು ಬಟ್ಟೆಗಳಿಂದಲೂ ತಯಾರಿಸಿದ ಪಾದುಕೆಗಳನ್ನು ಅರ್ಪಿಸಿ ಸ್ವಾಮಿಯ ಪೂಜೆ ಮಾಡಿ ಹೊಗಳಿ ಆರಾದಿಸುವ ಕಾಯಕ ಇವರದು.

ಮೇಲೆ ತಿಳಿಸಿದಂತೆ ಕೊರಮ ಸಮುದಾಯದಲ್ಲಿ ನಾಲ್ಕು ಬೆಡಗುಗಳಿವೆ. ಈ ನಾಲ್ಕು ಬೆಡಗುಗಳಲ್ಲಿ ಕಾವಾಡಿ ಮತ್ತು ಸಾತಪಾಡಿಗಳು ಬಹು ಪುರಾತನ ಮತ್ತು ಪ್ರಮುಖ ಬೆಡಗುಗಳು. ಮಾನಪಾಡಿ ಮತ್ತು ಮೇನ್ರಗುತ್ತಿಗಳು ತದನಂತರ ಉದ್ಭವವಾದವುಗಳಾಗಿವೆ. ಆಂಧ್ರ ಪ್ರದೇಶದ ಬಂದರ ನಾಡಿನಿಂದ ಕೃಷ್ಣ ಜಿಲ್ಲೆಗೆ ವಲಸೆ ಬಂದ ಸಮುದಾಯದ ಗುಂಪುಗಳು ಮಾನಪಾಡಿ ಮತ್ತು ಮೇನ್ರಗುತ್ತಿ ಎಂಬ ಹೆಸರುಗಳನ್ನು ಪಡೆದವು. ಸಾತಪಾಡಿ, ಕಾವಾಡಿ, ಬೆಡಗಿನವರು ಹಳೆ ಮೈಸೂರು ಪ್ರದೇಶದಲ್ಲೇ ಬಹಳಷ್ಟು ಸಂಖ್ಯೆಯಲ್ಲಿದ್ದಾರೆ. ಆದರೆ ಮಾನಪಾಡಿ ಮತ್ತು ಮೇನ್ರಗುತ್ತಿ ಬೆಡಗಿನವರು ಆಂಧ್ರ ಕರ್ನಾಟಕ, ತಮಿಳುನಾಡು ಕರ್ನಾಟಕ ಸರಹದ್ದುಗಳಲ್ಲಿ ಬಹುಸಂಖ್ಯೆಯಲ್ಲಿ ಕಂಡುಬಂದರೂ ಕೂಡ ಇಲ್ಲಿ ಮ್ಯಾನಪಾಡಿ ಮತ್ತು ಮ್ಯಾನ್ರಗುತ್ತಿ ಉಪಬೆಡಗುಗಳಾಗಿವೆ. ಆದರೆ ಮೈಸೂರು ಪ್ರದೇಶದಲ್ಲಿ ಈ ಎರಡು ಉಪ ಬೆಡಗುಗಳೂ ಪ್ರಮುಖ ಬೆಡಗುಗಳಾಗಿ ಕಂಡುಬರುತ್ತವೆ.

ಇನ್ನೊಂದು ಅಭಿಪ್ರಾಯದಂತೆ ಮೂಲದಲ್ಲಿ ಎರಡೇ ಬೆಡಗುಗಳು ಇದ್ದು ನಂತರದಲ್ಲಿ ಇನ್ನೆರಡು ಬೆಡಗುಗಳು ಹುಟ್ಟಿ ಬಂದಿರುವುದನ್ನು, ಗಮನಿಸಿದರೆ ಆ ಹೊಸ ಎರಡು ಬೆಡಗುಗಳು ತಮಿಳುನಾಡಿನಿಂದ ಕುಳುವರು ಆಂಧ್ರಪ್ರದೇಶಕ್ಕೆ ವಲಸೆ ಬಂದ ನಂತರ ಹುಟ್ಟಿ ಬಂದವುಗಳೆಂದು ಸ್ಪಷ್ಟವಾಗಿ ನಿರ್ಣಯಿಸಬಹುದಾಗಿದೆ. ಮಾನಪಡೆ ಎಂಬುದು ಮೆಹಬೂಬನಗರ ಜಿಲ್ಲೆಯ ಅಲಂಕೂರು ತಾಲ್ಲೂಕಿನ (ಕರ್ನೂಲು ಹತ್ತಿರ) ಒಂದು ಊರಾಗಿದ್ದು, ಮೈನ್ ವಾರಿಂಗರು ತಿಳಿಸಿರುವ ದೇವರು ಕೊಂಡ ಬೆಡಗು ಮೇನ್ಪಡಿಯ ಇನ್ನೊಂದು ಹೆಸರಾಗಿದೆ. ದೇವರ ಕೊಂಡವು ಕೂಡಾ ಮೆಹಬೂಬುನಗರ ಜಿಲ್ಲೆಯ (ನಾಗಾರ್ಜುನ ಸಾಗರದ ಹತ್ತಿರ) ಊರಾಗಿದೆ. ಮೊದಲು ಆ ಪ್ರದೇಶದಲ್ಲಿ ನೆಲೆನಿಂತು ನಂತರ ಅಲ್ಲಿಂದ ಕರ್ನಾಟಕಕ್ಕೆ ವಲಸೆ ಬಂದು ಸೇರಿರುವ ಕೊರಮರಲ್ಲಿ ಈ ಮಾನ್ಪಡಿ

ಬೆಡಗನ್ನು ಕಾಣಬಹುದಾಗಿದೆ. ಇದು ಊರಿನ ಹೆಸರಿನಿಂದಲೇ ಬಂದ ಬೆಡಗಾಗಿರ ಬಹುದು.

ಮೆಂಡ್ರಗುಟ್ಟಿ ಬೆಡಗು ಕೂಡ ಆಂಧ್ರಪ್ರದೇಶದ ಯಾವುದೋ ಊರಿನ (ಮಹೇಂದ್ರ ಗುತ್ತಿ) ಹೆಸರಾಗಿದೆ. ಬಹುಶಃ ಅಲ್ಲಿಂದ ವಲಸೆ ಬಂದ ಜನರು ತಾವು ಆ ಪ್ರದೇಶದಿಂದ ವಲಸೆ ಬಂದವರು ಎಂಬುದನ್ನು ಸೂಚಿಸಲು ಮೆಂಡ್ರಗುಟ್ಟಿ ಬೆಡಗಿನವರು ಎಂದು ಹೇಳಿಕೊಂಡಿರಬಹುದೆಂದು ಊಹಿಸಬಹುದಾಗಿದೆ.

ಮೇಲೆ ಹೇಳಿದ ಬೆಡಗಿನವರು ತಮ್ಮ ಮನೆತನದ ಹೆಸರುಗಳನ್ನು ಸಹ ತಮ್ಮ ಬೆಡಗುಗಳ ಮೂಲಕ ಗುರುತಿಸಿಕೊಳ್ಳುವುದು ವಾಡಿಕೆ. ಉದಾಹರಣೆಗೆ ಹಲವು ಮನೆತನದ ಹೆಸರುಗಳು ಈ ಕೆಳಗಿನಂತಿವೆ.

| | |
|---|---|
| ೦೧. ಆಂಬೋಜಲ | ೦೨. ಆವಲ |
| ೦೩. ಬಂಡಿ | ೦೪. ದಾಸರಿ |
| ೦೫ ಗಜ್ಜಲ | ೦೬. ಸಮುದ್ರಲ |
| ೦೭. ಥೋಕ | ೦೮. ವೆಂಕಟಗಿರಿ |
| ೦೯. ಕಂಪ | ೧೦. ಕನ್ನಗ |
| ೧೧. ಮೊಗಿರಿ | ೧೨. ಪೂಲು |
| ೧೩. ದಾಣಲ | ೧೪. ಸುಕ |
| ೧೫. ಉಯ್ಯಾಲ | |

ಈ ಪಂಗಡಗಳನ್ನು ಕಸುಬಿನ ಆಧಾರದ ಮೇಲೆ ಮುಖ್ಯವಾಗಿ ನಾಲ್ಕು ಉಪಗುಂಪು ಗಳಾಗಿ ವಿಭಾಗಿಸಬಹುದು. ಅವುಗಳೆಂದರೆ,

೧. ಉರು ಅಥವಾ ದಬ್ಬೆ ಕೊರಮ, ಕೊರಚ

೨. ಉಪ್ಪು ಅಥವಾ ಘಟ್ಟದ ಕೊರಮ

೩. ಕುಂಚಿಗೆ ಮತ್ತು ಸೊನಾಯ್ ಕೊರಚ (ಕೊರಮ)

೪. ಪತ್ರದ ಕೊರಚ, (ಕೊರಮ)

ಮೇಲೆ ಹೇಳಿದ ಪಂಗಡಗಳಲ್ಲದೆ ಕಸಬಾಧಾರಿತ ಪಂಗಡಗಳು ಇವರಲ್ಲಿವೆ. ಅವುಗಳನ್ನು ಈ ಕೆಳಗಿನಂತೆ ಕಾಣಬಹುದು.

**ಕೋಷ್ಟಕ : ೪.೧ ಕೊರಮರ ಒಳಪಂಗಡಗಳು**

| | | |
|---|---|---|
| ೦೧. ಭಜಂತ್ರಿ ಕೊರಮ | : | ಸಂಗೀತಗಾರರು |
| ೦೨. ತಪ್ಲೆ ೖ ಕೊರಮ | : | ಬಿದಿರು ಸಿಗಿಯುವವರು |
| ೦೩. ಕಾವಲ್ ಕೊರಮ | : | ಕಾವಲು ಕಾಯುವವರು |
| ೦೪. ಕುಂಚಿ ಕೊರಮ | : | ಪೊರಕೆ/ಕುಂಚು ತಯಾರಿಸುವವರು |
| ೦೫. ಕೊಡಿ ಕಟ್ಟೆ ಕೊರಮ | : | ಹಗ್ಗ ಮತ್ತು ಬಲೆಗಳನ್ನು ತಯಾರಿಸುವವರು |

| | | |
|---|---|---|
| ೦೬. ನರಿ ಕೊರಮ | : | ನರಿ ಬೇಟೆಗಾರರು |
| ೦೭. ಪಚ್ಚೆಕುಟ್ಟಿ ಕೊರಮ | : | ಹಚ್ಚೆ ಹಾಕುವವರು |
| ೦೮. ಉಪ್ಪು ಕೊರಮ | : | ಉಪ್ಪಿನ ವ್ಯಾಪಾರ ಮಾಡುವವರು |
| ೦೯. ಕೊಟ್ಟು ಕೈಕಾರಿಸ್ | : | ನೃತ್ಯ ಮಾಡುವವರು |
| ೧೦. ಪಾವು ಕೊರಮ | : | ಹಾವಾಡಿಸುವವರು |
| ೧೧. ರಾನೆ ಕೊರಮ | : | ಕಲ್ಲು ಹೊಡೆಯುವವರು |
| ೧೨. ಸದೇಪಟ್ಟಿ ಕೊರಮ | : | ಕಾಡಿನಲ್ಲಿ ವಾಸಿಸುವವರು |
| ೧೩. ಕರುವೆ ಪೆಳ್ಳೈ | : | ಎಲೆ, ವ್ಯಾಪಾರ ಮಾಡುವವರು |

ಈ ಕೊರವರಲ್ಲಿ ಕಾವಾಡಿ ಮತ್ತು ಸಾತ್ಪಡಿಗಳೆಂಬ ಎರಡು ಮುಖ್ಯ ಬೆಡಗುಗಳು ಇವೆ. ಇವರಲ್ಲಿ ಸಾತ್ಪಡಿ ಹಾಗೂ ಕಾವಾಡಿಯರ ನಡುವೆ ವೈವಾಹಿಕ ಸಂಬಂಧಗಳಾಗುತ್ತವೆ. ಈ ಕಾವಾಡಿ ಪದಕ್ಕೆ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುವುದು. ಮಾನೆ, ಮಲ್ಲಾಗ, ಗಾಯಕವಾಡ ಎಂಬ ಪದಗಳು ಕಾವಾಡಿ ಪದದ ಪರ್ಯಾಯ ಪದಗಳೇ ಆಗಿವೆ. ಅದರಂತೆ ಸಾತ್ಪಡಿ ಪದಕ್ಕೆ ಅನುಕ್ರಮವಾಗಿ ಜಾಧವ, ಗುಜನಾಗ, ಪವಾರ ಎಂಬ ಪರ್ಯಾಯ ಪದಗಳು ಕಂಡುಬರುತ್ತವೆ. ಅಂದರೆ ಕೊರವರಲ್ಲಿ ಕಾವಾಡಿಯ, ಮಾನೆ, ಮಲ್ಲಾಗ, ಗಾಯಕವಾಡ ಮನೆಯ ಕನ್ಯೆಯು ಸಾತ್ಪಡಿಯ ಜಾಧವ, ಗುಜನಾಗ, ಪವಾರ ಮನೆತನದ ವರನಿಗೆ ಸಲ್ಲಬೇಕು. ಇಲ್ಲಿಯವರೆಗೆ ಕಾವಾಡಿಗಳಲ್ಲಿ ೮೮ ಮತ್ತು ಸಾತ್ಪಡಿಗಳಲ್ಲಿ ೯೭ ಒಳಕುಲಗಳನ್ನು ಪತ್ತೆಹಚ್ಚಲಾಗಿದ್ದು ಈ ಕೆಳಗಿನಂತೆ ಅವುಗಳನ್ನು ಕಾಣಬಹುದು.

**೧. ಕಾವಾಡಿಯಲ್ಲಿ** ೧)ಇಂಗಳೆ ೨) ಓಕಮಾಂಡ ೩) ಓಲಗರಾಯ ೪) ಕರಾಯ ೫) ಕರ್ತನಾಗ ೬) ಕಾಡೆ ೭) ಕಾಂತ್ರಾಯ ೮) ಕಾಡರಾಯ ೯) ಕ್ವಾಟಕೂನಾಗ ೧೦)ಕುಡರಾಯ ೧೧) ಕುಂಭರಾಯ ೧೨) ಕೋಟಿಗೌಡ ೧೩) ಕೊಂಕಣಿ ೧೪) ಗ್ಯಾಜರಾಯ ೧೫) ಗೌಡಸರ ೧೬) ಗಜರೆ ೧೭) ಚಿಟಾಣಿ ೧೮) ಜಿತರಾಯ ೧೯) ಜಾಲಗೇರಿ ೨೦) ಜಾಮಗಲ ೨೧) ಗೂಡಾಮಾನಕೆ ೨೨) ತಾಂಬರಾಯ ೨೩) ತೆಲಗರಾಯ ೨೪) ದನಾಕರೆ ೨೫) ದಾನೆ ೨೬) ದಿಷ್ಟ್ಯಾಂಗನಾಗ ೨೭) ದೇವಗಿರಿ ೨೮) ದೋಡರೆ ೨೯) ಧಿತರಾಯ ೩೦) ನಾಗೋರ ೩೧) ನರಗುಂದರೇಣ ೩೨) ನಲಗುಮ ೩೩) ನಳಗುಂದರೆ ೩೪) ನಾಗವಾರ ೩೫) ನಾಗರೇಶಿ ೩೬) ನೇರಿಯಾಯ ೩೭) ನೇರಿರಾಯ ೩೮) ಪತ್ತೆ ೩೯) ಪಂಚರೇಶಿ ೪೦) ಪಾಕೆ ೪೧) ಪಾಚರನಾಗ ೪೨) ಪಾಂಡ್ರಾಯ ೪೩) ಪಾತ್ರಾಯ ೪೪) ಪುರ್ಜು ೪೫) ಪುತೋ೯ ೪೬) ಪೇನಗುಡ್ಡ ೪೭) ಪಾಂಢರೆ ೪೮) ಪ್ರೋತರಾಯ ೪೯) ಬಳವಂತ ೫೦) ಬಳಗೆ ೫೧) ಬುನಾಗರೆ ೫೨) ಬಾರಬರಾಯ ೫೩) ಬುಲಾದರೆ ೫೪) ಬುಲಗರಾಯ ೫೫) ಭೂನಾದರಾಯ ೫೬) ಬುನಂದರ ೫೭) ಬೆರಗುಡ್ಡ ೫೮) ಮುಳೆ ೫೯) ಮಿಯೆಡಿರಿ ೬೦) ಮಲಾಜುರ ೬೧) ಮಂತ್ರಾಳೆ ೬೨) ಮಾನೆ ೬೩) ಮಾನಕೆ ೬೪)

ಮ್ಯಾಡಗುತ್ತ ೬೫) ಮುಮ್ಮಡಿ ೬೬) ಮೂತ್ರಾ ೬೭) ಯಾರ್ಸನಾಗ ೬೮) ಯಾರ್ಸೂರ ೬೯) ರಾಮಗಿರಿ ೭೦) ಎಲಾಯತಿ ೭೧) ಶ್ಯಾಮಗಿರಿ ೭೨) ಸ್ವಾಮವಿರೆ ೭೩) ಸತವಾರ ೭೪) ಸರಾಯ ೭೫) ಸಾಡರಾಯ ೭೬) ಸಾಲರಾಯ ೭೭) ಸ್ವೊನಾಜಾಕ ೭೮) ಸ್ವಾಲಕರಾಯ ೭೯) ಸಂಗೊಳ್ಳಿ ೮೦) ಸಂಕದೊ(ಸುಂಕನಾಗ) ೮೧) ಹಜಾರೆ ೮೨) ಹಿರಗನಾಗ ೮೩) ಗುತ್ತಬಸವ ೮೪) ಇರಕಾ ೮೫) ಸನ್ನಕ್ಕಿ ೮೬) ಹಂಗಸರಾಯ ೮೮) ಇಲಾತಿ.

೨. ಸಾತ್ಪಡಿಯಲ್ಲಿ ೧) ಅಬುಲಸಾರ ೨) ಆಗಾನೆ ೩) ಇಟಸಾರ ೪) ಇದಗಾಲ ೫) ಉಚಗಾಯ ೬) ಉತಲಾಸರ ೭) ಉಲಗರಾಯ ೮) ಕಟಾರೆ ೯) ಕಾಯಸರ ೧೦) ಕಾಳಸರ ೧೧) ಕಾಲಗಾಗ್ರಿ ೧೨) ಕಿರಕಾವೆ ೧೩) ಕ್ವಾಂಕನಾಳ ೧೪) ಕಿಸಲಸರ ೧೫) ಕಿರಣಸರ ೧೬) ಮಧು ೧೭) ಕುಕಸಾರ ೧೮) ಕುಪ್ಪಸೆಟ್ಟಿ ೧೯) ಕೋಣಸರ ೨೦) ಮೆಂಡಕೆ ೨೧) ಗ್ಯಾನಸರ ೨೨) ಗೌಸರ ೨೩) ಚಪಾಡಸರ ೨೪) ಚಪಾಟಸರ ೨೫) ಚಪಾಟಸರ ೨೬) ಚಾಣಕನಾಗ ೨೭) ಚಪಟಸ ೨೮) ಚಿಟಪೋತ ೨೯) ಜಗತೇರಿ ೩೦) ಜಗಡಸರ ೩೧) ಜಂಗಳಸರ ೩೨) ಜಾಗಳಸಾರ ೩೩) ಜಾಲಿಮಸಾರ ೩೪) ತಿರಕಾಯಿ ೩೫) ತುಬಕಿತುಂಡ್ರ ೩೬) ದರೀಬಾಗ ೩೭) ದಾಸಫಾ ೩೮) ಯಾಳಂಗಿ ೩೯) ಗುಣಮಾಳ ೪೦) ದೀಪಸರ ೪೧) ದುಮಾಲಸರ ೪೨) ಧುತರಾಯ ೪೩) ಡೋಂಗರೆ ೪೪) ನಿಜಾಮಸರ ೪೫) ಪಟ್ಯಾಲ ೪೬) ಪ್ರಸಾದೆ ೪೭) ಪಾಲಿಕಸರ ೪೮) ಪ್ಯಾದನಾಗ ೪೯) ಬಾಕ್ಸರ ೫೦) ಬಾಡಸರ ೫೧) ಬಾಣಸೋರೆ ೫೨) ಬಿಜಲಿಸರ ೫೩) ಬೇರಹೊತ್ನಾಗ ೫೪) ಬಡಗನಾಗ ೫೫) ಬೆರತನಾಗ ೫೬) ಬೆಲಸರ ೫೭) ಬ್ಯಾಲಸರ ೫೮) ಬಂಗಾರೆ ೫೯) ಭೂಪನಾಗ ೬೦) ಭೂಮಸಾರ ೬೧) ಮಾಚಕಾನ ೬೨) ಮಾಚಗಾಳ ೬೩) ಮಾನನಾಳು ೬೪) ಮಾನಪಡೆ ೬೫) ಮಿನ್ನೊ ೬೬) ಮಿದಾಮಸಾರ ೬೭) ಮಾನಾಡ ೬೮) ಮಲಿಕಸರ ೬೯) ಮುಖತ್ಕಾರ ೭೦) ಖಿಡಾಖಿಡೆ ೭೧) ಯ್ಯಾಂಗಟ್ಯಾನಾಗ ೭೨) ಏಳಮೂಳ ೭೩) ಏರಕೇರ ೭೪) ರಾಯಸರ ೭೫) ರೋಡನೆಲ್ಲಿ ೭೬) ಲಲ್ಲಸಂದ್ರ ೭೭) ಲಕ್ಷಂದರ ೭೮) ಮಾಟಿ ೭೯) ಲಾಲಸರ ೮೦) ಕುಂಬಸಾರ ೮೧) ಲೋಖಂಡೆ ೮೨) ಲೋಡೆ ೮೩) ವಜ್ರ ೮೪) ಒಂಟಿಲಿ ೮೫) ಸಮಾಟಸರ ೮೬) ಸಂಗನಾಳ ೮೭) ಸಾರಂಗಿ ೮೮) ಸುಖಸಾರ ೮೯) ಸೋಲಾಪುರೆ ೯೦) ಹವಾಲೆ ೯೧) ಹವಳ್ಯಾನಾಗ ೯೨) ಹಾಸಿಲಸರ ೯೩) ಲಕ್ಷ್ಯಾವರ ೯೪) ಎಣಗನಾವರ ೯೫) ಮುದ್ದಲಸಾರ ೯೬) ತವಟೆಣ್ಣವರ ೯೭) ಶ್ಯಾಪೋಚಿ.

ಅನ್ಯ ಸಮುದಾಯಗಳಲ್ಲಿ ಬಳಿಗಳಿರುವ ಹಾಗೆ ಕೊರಮ ಬುಡಕಟ್ಟಿನಲ್ಲಿಯೂ ಬಳಿಗಳಿವೆ. ಇಂದಿಗೂ ಅವುಗಳ ಪಾಲನೆ ಅತಿ ಕಟ್ಟುನಿಟ್ಟಾಗಿ ನಡೆಯುತ್ತದೆ. ತನ್ನ ಮೂಲದ ಶುದ್ಧತೆಯನ್ನು ಕಾಯ್ದುಕೊಳ್ಳುವಲ್ಲಿ ಈ ಬೆಡಗುಗಳು ಪ್ರಮುಖ ಪಾತ್ರವನ್ನು ವಹಿಸಿವೆ ಹಾಗೂ ಆ ಕಾರಣಕ್ಕಾಗಿಯೇ ಹಿಂದೆ ಈ ಬೆಡಗುಗಳು ರೂಪಗೊಂಡಿವೆ.

ಈ ಬುಡಕಟ್ಟಿನವರು ಯಾವುದೇ ಹೆಸರಿನಿಂದ ಗುರುತಿಸಿಕೊಳ್ಳುತ್ತಿದ್ದರೂ ಇವರು ಯಾವುದೇ ಪ್ರದೇಶದಲ್ಲೂ ಇದ್ದರೂ ಸಂಬಂಧಗಳನ್ನು ಬೆಡಗುಗಳ ಮೂಲಕವೇ ಮಾಡುತ್ತಾರೆ. ಅವುಗಳಾದ ೧. ಕಾವಾಡಿ ೨. ಸಾತ್ಪಾಡಿ ೩. ಮ್ಯಾನಪಾಡಿ ೪ಮೇನ್ರಗತ್ತಿ.

ದಕ್ಷಿಣ ಕರ್ನಾಟಕದ ಕೊರಮರಲ್ಲಿ ೧. ಕಾವಾಡಿ ೨. ಸಾತ್ಪಾಡಿ ಬೆಡಗುಗಳು ಕಂಡರೆ, ಕೊರಚರಲ್ಲಿ ಮ್ಯಾನಪಾಡಿ ಮತ್ತು ಮೇನ್ರಗುತ್ತಿಯನ್ನು ಕಾಣಬಹುದಾಗಿದೆ. ಕೊರಚರಿಗೂ, ಕೊರಮರಿಗೂ ಒಂದು ಕಾಲದವರೆಗೆ ಹೆಣ್ಣು ಗಂಡು ನಡೆಯುತ್ತಿರಲಿಲ್ಲ. ಕಾರಣ "ಒಬ್ಬರಿಗೊಬ್ಬರು ಅವರಿಗಿಂತ ನಾವೇ ಮೇಲು"(The Mysore Tribes and Castes: Vol.III:588) ಎಂದು ಹೇಳಿಕೊಳ್ಳುವುದನ್ನು ಎಚ್ ವಿ ನಂಜುಂಡಯ್ಯ ಮತ್ತು ಅನಂತಕೃಷ್ಣ ಐಯ್ಯರ್ ಅವರು ದಾಖಲಿಸಿದ್ದಾರೆ. ಅವರು ಈ ಎರಡು ಪಂಗಡಗಳನ್ನು ಬೇರೆಯಾಗಿ ಗುರುತಿಸಿದ್ದಲ್ಲದೆ, ಬೆಡಗುಗಳು ಕೂಡಾ ಪ್ರತ್ಯೇಕವಾಗಿ ಗುರುತಿಸಲು ಪ್ರಯತ್ನಿಸಿದ್ದಾರೆ. ಆದರೆ ವಾಸ್ತವಿಕವಾಗಿ ಈ ಎರಡು ಪಂಗಡಗಳ ಬೆಡಗುಗಳಲ್ಲಿ ಯಾವುದೇ ವ್ಯತ್ಯಾಸ ಕಂಡು ಬರುವುದಿಲ್ಲ. ಇವೆರಡು ಬೇರೆ ಬೇರೆ ಅಲ್ಲ. ಇವರನ್ನೆ ಒಂದು ಪ್ರದೇಶದಲ್ಲಿ ಕೊರಚರು ಎಂದು ಕರೆದರೆ ಮತ್ತೊಂದು ಪ್ರದೇಶದಲ್ಲಿ ಕೊರಮರೆಂದು ಕರೆಯುವುದನ್ನು ಕಾಣಬಹುದು.

ಜಾನಪದ ವಿಶ್ವಕೋಶದಲ್ಲಿ ಮೈನ್ ವಾರಿಂಗ್ ಅವರು ಬೆಡಗುಗಳ ಬಗೆಗೆ ಹೇಳಿದ್ದಾರೆ. ಅವುಗಳಲ್ಲಿ ಸಂಕ್ಯೆ, ಸಂಪತಿ, ಸಾತುಪಡಿ, ಕಾವಡಿ ಅಥವಾ ಗಜ್ಜಲ, ದೇವರಕೊಂಡ, ಮಿಂಡ್ರಕುಟ್ಟಿ ಅಥವಾ ಮಿನಪಡಿ. ಮೊದಲ ಎರಡು ವರ್ಗದವರು ಶುದ್ಧ ಕೊರಮರು. ಅಂದರೆ ಕೊರವರ ಜಾತಿಯಲ್ಲಿ ನ್ಯಾಯಬದ್ಧವಾಗಿ ವಿವಾಹ ವಾದವರಲ್ಲಿ ಹುಟ್ಟಿದವರು. ಮೂರನೆಯ ವರ್ಗದವರು ಮಿಶ್ರ ಮದುವೆಯಿಂದ ಜನಿಸಿದವರು(ಕನ್ನಡ ಜಾನಪದ ವಿಶ್ವಕೋಶ ೫:೨೬) ಎನ್ನುವಲ್ಲಿ ಸಂಕ್ಯೆ, ಸಂಪತಿ, ಗಜ್ಜಲ ಎನ್ನುವ ಹೊಸ ರೂಪಗಳು ಕಂಡಬಂದರೂ ಸಾತುಪಡಿ, ಕಾವಾಡಿ, ಮಿಂಡ್ರಕುಟ್ಟಿ ಮಿನಪಡಿ ಸ್ವಲ್ಪ ವ್ಯತ್ಯಾಸದೊಂದಿಗೆ ದಕ್ಷಿಣ ಕರ್ನಾಟಕದಲ್ಲಿ ಕೊರಮ ಬುಡಕಟ್ಟಿನಲ್ಲಿ ಪ್ರಚಲಿತವಿವೆ. ಮತ್ತು ಮೊದಲೆರಡು ವರ್ಗದವರು ನ್ಯಾಯಬದ್ದವಾಗಿ ಜನಿಸಿದವರು. ಮೂರನೆಯ ವರ್ಗದವರು ಮಿಶ್ರ ಮದುವೆಯಿಂದ ಜನಿಸಿದವರೆನ್ನುವ ಕಲ್ಪನೆ ದಕ್ಷಿಣ ಕರ್ನಾಟಕದಲ್ಲಿ ಮಾತ್ರ ಕಂಡು ಬಂದಿದ್ದು ಉಳಿದ ಕಡೆ ಇಂತಹ ಕಲ್ಪನೆ ಕಂಡುಬರುವು ದಿಲ್ಲ.

ಬೆಡಗಿನ ಹೆಸರುಗಳು ಅಚ್ಚ ತಮಿಳು ರೂಪವಾದ ಕುಳವ ಭಾಷೆಯವು. ಆ ಹೆಸರಿನ ಪದಗಳಿಗೆ ಎಚ್ ವಿ ನಂಜುಂಡಯ್ಯ ಅವರು ಅರ್ಥವನ್ನು ಸಂಗ್ರಹಿಸಿ ಕೊಡುವುದರ ಜೊತೆಗೆ ಉಪ್ಪು ಕೊರವರ ಉಪ ಬೆಡಗುಗಳನ್ನು ಈ ಕೆಳಗಿನಂತೆ ಹೇಳಿದ್ದಾರೆ.

| | | | |
|---|---|---|---|
| Ambojala | - lotus | Mogili | - (Pandanus fascicularis) |

| | | | |
|---|---|---|---|
| Avula | - Cows | Pulu | - Flowers |
| Bandi | - Cart | Ragala | - Ragi, Grain |
| Dasari | - Vishnava Mendicant | Samudrala | - Sea |
| | | Suka | - Star |
| Gaggala | - Small bell | Thoka | - (tail) |
| Kampa | - bush of thorms | Uyyal | - Swing |
| | | Venkatagiri | - A town |
| Kanaga | - (Pongamia glamera) | | |
| Katari | - dagger | | |

ಎಂದು ಥರ್ಸ್ಟನ್ ಅವರು ದಾಖಲಿಸಿರುವ ಅಂಶವನ್ನೇ ಹೇಳಿದ್ದಾರೆ. ಇವನ್ನು ಆ ಜನರನ್ನು ಗುರುತಿಸುವ ಒಳಬೆಡಗುಗಳು ಎಂದಿದ್ದಾರೆ. ಮೇಲೆ ಹೇಳಿದ ಯಾವ ಬೆಡಗುಗಳು ಇಂದು ಕೊರಮರಲ್ಲಿ ಕಾಣಿಸುವುದಿಲ್ಲ. ಆದರೆ ಕಾವಾಡಿ, ಸಾತ್ಪಾಡಿ ಎಂಬ ಬೆಡಗುಗಳು ಬಳಕೆಯಲ್ಲಿವೆ.

ಮಿಕಾಯಿಲ್ ಕೆನಡಿ ಅವರು ಕೊರವರ ನಾಲ್ಕು ಬಗೆಯ ವಿವಿಧ ಗುಂಪುಗಳನ್ನು ಹೇಳುತ್ತಾ "Each sub division is again divided four clans or goths, namely 1) Satpadi 2) Melpadi 3) Kavadi 4) Mendra Gutti" (Criminal Classes in the Bombay Presidency:63) ಎಂಬ ಬೆಡಗುಗಳನ್ನು ದಾಖಲಿಸಿದ್ದಾರೆ. ಕೊರಮ ಬುಡಕಟ್ಟಿನವರು ಬೊಂಬಾಯಿ ಪ್ರಾಂತದವರಾಗಿರಲಿ, ತಮಿಳುನಾಡಿನವರಾಗಲಿ, ಕರ್ನಾಟಕದಲ್ಲಿರುವವರಾಗಲಿ ಇವರೆಲ್ಲರಲ್ಲಿರುವ ಬೆಡಗುಗಳು ಮಾತ್ರ ಒಂದೇ ಆಗಿವೆ. ಅವರೆಲ್ಲರೂ ಮೂಲದಲ್ಲಿ ಒಂದೇ ಎಂಬುದನ್ನು ಇವು ಸೂಚಿಸುತ್ತವೆ.

**ಹೆಣ್ಣು, ತೆರ, ಮದುವೆ**

ಮದುವೆಗೆ ಬಂದ ವಯಸ್ಕ ಮಗನಿಗೆ ತಂದೆ ಅಥವಾ ಮನೆಯ ಹಿರಿಯರು ಹೆಣ್ಣನ್ನು ಹುಡುಕುವುದು ವಾಡಿಕೆಯಲ್ಲಿದೆ. ಮಗನ ಮದುವೆ ಮಾಡಲು ತಂದೆ ತಾಯಿಗಳು ಹೆಣ್ಣು ಇರುವ ಸ್ಥಳವನ್ನು ತಿಳಿದುಕೊಂಡು ನಾಲ್ಕಾರು ಜನ ಸೇರಿ ಕನ್ಯೆಯನ್ನು ನೋಡಲು ಹೋಗುವರು. ಸಜಾತಿ ಬೆಡಗಿನ ಕನ್ಯೆಯನ್ನು ಬಿಟ್ಟು ವಿಜಾತಿ ಬೆಡಗಿನ ಕನ್ಯೆಯನ್ನು ಹುಡುಕಿ ನಿಶ್ಚಯ ಮಾಡಿ, ಮದುವೆಯ ಶುಭ ಮುಹೂರ್ತವನ್ನು ಬ್ರಾಹ್ಮಣರಿಂದ ಗೊತ್ತುಪಡಿಸಿಕೊಳ್ಳುತ್ತಾರೆ. ಮದುವೆಯ ಯಾವುದೇ ಕಾರ್ಯದಲ್ಲಿ 'ಓಕಾಳಿ(ಕುಲದ ಮುಖ್ಯಸ್ಥ) ಹಾಗೂ ಓಕಾಳ್ತಿ(ಕುಲದ ಮುಖ್ಯಸ್ಥಳು) ಮತ್ತು ಮದುಮಗನ ಸೋದರಮಾವ ಇರಲೇಬೇಕು. ಹೆಣ್ಣನ್ನು ತಾವು ಒಪ್ಪಿಕೊಂಡ ಮೇಲೆ, ವಧು ವರರ ಕಂಕಣಕೂಡಿಕೆ ಅಂದರೆ ಇಬ್ಬರ ಹೆಸರು, ಬಲದ ಬಗ್ಗೆ ಪುರೋಹಿತರಿಂದ ಶಾಸ್ತ್ರ

ಕೇಳುತ್ತಾರೆ. ಇದು ಸರಿಯಾಗಿ ಬಂದಲ್ಲಿ ಹೆಣ್ಣು ಗಂಡುಗಳ ತಂದೆ ತಾಯಿಯರು ಒಟ್ಟಿಗೆ ಕಲಿತು ಮಾತನಾಡಿಕೊಂಡು, ಓಕಾಳಿಯವರು ನಿಗದಿಪಡಿಸಿದಷ್ಟು ಕನ್ಯಾ ಶುಲ್ಕವನ್ನು ವರನ ತಂದೆ ತಾಯಿಗಳು ಕೊಡಲೇಬೇಕು. ನಂತರ ಒಂದು ಶುಭ ದಿವಸ ವಿಳ್ಯಶಾಸ್ತ್ರವನ್ನು ಗೊತ್ತು ಮಾಡುತ್ತಾರೆ. ಕಾವಡಿ, ಮೆಂಡ್ರಗುತ್ತಿ, ಸಾತ್ಪಾಡಿ, ಮೇನ್ಪಾಡಿ ಈ ನಾಲ್ಕು ಕುಲಗಳಲ್ಲಿ ಮೊದಲು ಎರಡು ಕುಲಗಳಾದ ಕಾವಾಡಿ ಮತ್ತು ಮೆಂಡ್ರಗುತ್ತಿಗಳ ನಡುವೆ ಹೆಣ್ಣು ಕೊಡುವ ಮತ್ತು ತರುವುದಿಲ್ಲ. ಏಕೆಂದರೆ ಅವರಿಬ್ಬರು ಅಣ್ಣ ತಮ್ಮಂದಿರು ಎಂದು ಭಾವಿಸುತ್ತಾರೆ. ಅದೇ ರೀತಿ ಎರಡನೆಯ ಗುಂಪಾದ ಸಾತ್ಪಾಡಿ ಮತ್ತು ಮೇನ್ಪಾಡಿಗಳೂ ಸಹ ತಾವು ಒಂದೇ ದೇವರ ಮಕ್ಕಳೆಂದು ನಂಬಿರುತ್ತಾರೆ. ಕಾವಾಡಿ ಮತ್ತು ಮೆಂಡ್ರಗುತ್ತ ಕುಲದವರು ಸಾತ್ಪಾಡಿ ಮತ್ತು ಮೇನ್ಪಾಡಿ ಅಥವಾ ಮಾನ್ಪಡಿ ಕುಲಗಳಲ್ಲಿ ಹೆಣ್ಣು ತರಬಹುದು ಹಾಗೂ ಕೊಡಬಹುದು.

**ವಧುದಕ್ಷಿಣೆ** (ತೆರ): ಗಂಡಿನವರು ಹೆಣ್ಣನ್ನು ನಿಶ್ಚಯಿಸಿದ ನಂತರ ಹೆಣ್ಣಿನವರಿಗೆ ಕೊಡುತ್ತಿದ್ದ ದಕ್ಷಿಣೆಯೇ ತೆರ. ತೆರದಲ್ಲಿ ಸಣ್ಣತೆರ ಮತ್ತು ದೊಡ್ಡತೆರ ಎಂದು ಎರಡು ಬಗೆಗಳಿವೆ. ಸಣ್ಣ ತೆರದ ಮೊತ್ತ ಎಪ್ಪತ್ತೆರಡು ರೂಪಾಯಿ ಇದ್ದರೆ ದೊಡ್ಡ ತೆರದ ಮೊತ್ತ ತೊಂಬತ್ತಾರು ರೂಪಾಯಿಗಳು. ಅನುಕೂಲವಿದ್ದವರು ದೊಡ್ಡ ತೆರ ಕೊಟ್ಟರೆ ಬಡವರು ಸಣ್ಣತೆರ ಕೊಡುವ ವಾಡಿಕೆ ಇದೆ. ಕೊರಮ ಸಮುದಾಯದಲ್ಲಿ ಯಾವುದೇ ವರದಕ್ಷಿಣೆ ಕೊಡುವುದು ಇರುವುದಿಲ್ಲ. ಆದರೆ ಮದುವೆಯ ಸಮಯದಲ್ಲಿ ಸುಲ್ಲಿಯಂತೆ ಹೆಣ್ಣಿನ ಸೋದರ ಮಾವನಿಗೆ ೬೪ ರೂಪಾಯಿಗಳು ನೀಡುತ್ತಾರೆ. ಏಕೆಂದರೆ ಮುಂದೆ ಮಗಳಿಗೆ ಹೆಣ್ಣು ಮಗು ಹುಟ್ಟಿದರೆ ಅದು ಸೋದರ ಮಾವನಿಗೆ ಕೊಡಬೇಕು ಎಂದು ೬೪ ರೂ. ಕೊಡುವರು. ಗಂಡಿನವರು ಹೆಣ್ಣಿನ ತವರು ಮನೆಗೆ ತರುವಾಯ ಅದರಲ್ಲಿ ಅರ್ಧ ಭಾಗ ಎಂದರೆ ೩೨ ರೂಪಾಯಿ ನೀಡುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಮೇಲಿನ ಸಂಪ್ರದಾಯದೊಂದಿಗೆ ವರದಕ್ಷಿಣೆ ಕೊಡುವ ಪದ್ಧತಿ ರೂಢಿಗೆ ಬಂದಿದೆ,ಬಹುಶಃ ಆಧುನಿಕರಣದ ಪ್ರಭಾವವೇ ಇದಕ್ಕೆ ಕಾರಣವಾಗಿರಬಹುದು.

ಎಚ್ ವಿ ನಂಜುಂಡಯ್ಯ ಅವರು ಈ ತೆರದ ಬಗೆಗ "The amount of bride price or seventy two rupees and in some places twenty pagodas or sixty rupees. It is said that some times, as much as sum of Rs. 100/- has to be paid" (The Mysore Tribes and Castes: Vol.III: 596) ಎಂದು ವಿವರವನ್ನು ಸಂಗ್ರಹಿಸಿ ದಾಖಲಿಸಿದ್ದಾರೆ. ಹಣದ ಮೊತ್ತದಲ್ಲಿ ಹೆಚ್ಚು ಕಡಿಮೆಯಾದರೂ, ಕರ್ನಾಟಕದಲ್ಲಿ ತೆರವು ಪದ್ಧತಿ ರೂಢಿಯಲ್ಲಿದೆ.

**ನಿಶ್ಚಿತಾರ್ಥ:** ಕೊರಮ ಸಮುದಾಯದಲ್ಲಿ ನಿಶ್ಚಿಯವಾಗದೆ ಮದುವೆಗೆ ಅನುಮತಿ ದೊರೆಯುವುದಿಲ್ಲ. ಗಂಡಾಗಲಿ, ಹೆಣ್ಣಾಗಲಿ ತನ್ನ ಸಂಗಾತಿಯನ್ನು ಆಯ್ಕೆ ಮಾಡುವಲ್ಲಿ ಹಿರಿಯರು ಪ್ರಮುಖ ಪಾತ್ರವಹಿಸುವರು. ದಿನ ನಿತ್ಯದಂತೆ ಹೆಂಡದ ಅಂಗಡಿಯಲ್ಲಿ ಕುಡಿಯುತ್ತಿರುವಾಗ ಸಮುದಾಯದ ಹಿರಿಯರು ಮಾತುಗಳ ಮುಖಾಂತರ ಬೆಡಗಿಗೆ

ಅನುಗುಣವಾಗಿ ಹೆಣ್ಣನ್ನು ಕೊಡತೆಗೆದುಕೊಳ್ಳುವ ಕುರಿತು ಮಾತುಕತೆ ಪ್ರಾರಂಭವಾಗುತ್ತದೆ. ಹೆಣ್ಣಿಗೂ ಗಂಡಿಗೂ ಹಿರಿಯರು ನೋಡದಿದ್ದರೂ ಕೂಡ ಹಿರಿಯರು ಒಪ್ಪಂದ ಮಾಡುತ್ತಾರೆ. ಒಪ್ಪಂದ ಆದನಂತರ ಕೂಡ ಹೆಣ್ಣಿನ ಕಡೆಯ ಹಿರಿಯರು ಮತ್ತು ಗಂಡಿನ ಕಡೆ ಹಿರಿಯರು ಹೆಂಡದ ಅಂಗಡಿಗೆ ಹೋಗಿ ಹೆಂಡ ಕುಡಿಯುತ್ತಾರೆ. ತದ ನಂತರ ಮನೆಗೆ ಹೋಗಿ ತಮ್ಮ ಮಕ್ಕಳಿಗೆ ತಿಳಿಸುತ್ತಾರೆ. ಮಕ್ಕಳಿಗೆ ಇಷ್ಟವಾದರೆ ಸರಿ ಇಷ್ಟವಾಗದಿದ್ದರೂ ಸರಿಯೆ ಮದುವೆಯಾಗಬೇಕು ಎಂದು ನಿರ್ಣಯಿಸಲಾಗುತ್ತದೆ. ಹಿರಿಯರ ನಿರ್ಣಯದಂತೆ ಮದುವೆ ನಡೆಯಲೇಬೇಕು.

ಗಂಡಿನ ಕಡೆಯವರು ಒಂದು ಸೀರೆ, ಎಲೆ ಅಡಿಕೆ, ತೆರವನ್ನು ಕೊಟ್ಟು ಓಕಳಿಗಳ ಎದುರಿಗೆ ಈ ಹೆಣ್ಣನ್ನು ತಮ್ಮ ವರನಿಗೆ ತೆಗೆದುಕೊಂಡಿರುವುದಾಗಿ ಗಂಡಿನ ಕಡೆಯ ಓಕಾಳಿ ಹೇಳುತ್ತಾನೆ. ನಂತರ ಎಲೆ ಅಡಿಕೆ ಹಂಚುವ ಕಾರ್ಯ ನಡೆಯುತ್ತದೆ. ನಂತರ ಕೇರಿಯವರಿಗೂ ಹಾಗೂ ಬಂದಂಥ ಬಂಧುಬಳಗದವರೆಲ್ಲ ಊಟಕ್ಕೆ ನಡೆಯುತ್ತಾರೆ. ಊಟದ ತರುವಾಯ ಗಂಡಿನವರು ನೂರು ರೂಪಾಯಿ ದೈವದವರಿಗೆ ಕೊಟ್ಟರೆ ಹೆಣ್ಣಿನವರು ಐವತ್ತು ರೂಪಾಯಿ ನೀಡಬೇಕು. ಇದು ದೈವದ ರೊಕ್ಕ, ಇದು ದೈವದ ಮುಖಂಡರು ಹಂಡ ಕುಡಿಯುವುದಕ್ಕೆ ಉಪಯೋಗಿಸಲಾಗುತ್ತದೆ. ಈ ದುಡ್ಡು ಕೊಡುವ ಮುಖ್ಯ ಉದ್ದೇಶ ಎಂದರೆ ಮುಂದೆ ಹೆಣ್ಣಿನ ಮತ್ತು ಗಂಡಿನ ಕಡೆಯವರಿಗೆ ಒಳ ಜಗಳ, ಸಮಸ್ಯೆಗಳು ಬಂದರೆ ದೈವದವರು ಈಗ ಕುಡಿದಿದ್ದು ನೆನಪಿನಲ್ಲಿಟ್ಟುಕೊಂಡು ನ್ಯಾಯ ಬಗೆಹರಸಲಿ ಎಂಬುದಾಗಿದೆ. ನಿಶ್ಚಯ ಕಾರ್ಯಕ್ಕೆ ಊಟದ ಖರ್ಚು ಗಂಡಿನ ಕಡೆಯವರೇ ನೋಡಿಕೊಳ್ಳುತ್ತಿದ್ದರು. ಆದರೆ ಇತ್ತಿಚೆಗೆ ಇದರಲ್ಲಿ ಸ್ವಲ್ಪ ಬದಲಾವಣೆ ಕಂಡುಬರುತ್ತದೆ. ಹೆಣ್ಣಿನ ಕಡೆಯವರು ಗಂಡಿಗೆ ತಮ್ಮ ಹೆಣ್ಣು ಇಷ್ಟವಾಯಿತೋ ಇಲ್ಲವೊ ಎಂದು ದೈವದೊಳಗೆ ಕೇಳುತ್ತಾರೆ. ಆಗ ಗಂಡು ಇಷ್ಟವಾಯಿತು ಎಂದ ಮೇಲ ಗಂಡಿನವರು ಹೆಣ್ಣಿಗೆ ಸೀರೆ, ಬಳೆ, ಡಾಭ, ಬೆಂಡೊಲಿ, ಹೂವು, ಕಾಲುಂಗುರ, ತೊಡಿಸುವರು. ಮತ್ತು ಗಂಡಿನ ಕಡೆಯವರು ಹೆಣ್ಣಿನವರಿಗೆ ಕುಂಕುಮ ನೀಡುವರು.

ಹಂದರ: ಮದುವೆಯಲ್ಲಿ ಹಂದ್ರ ಹಾಕುವುದು ಒಂದು ಪ್ರಮುಖ ಸಂಪ್ರದಾಯ. ಮದುವೆಗೆ ಒಂದು ದಿನಾ ಮೊದಲು ಗಂಡಿನ ಮನೆಯಲ್ಲಿ ಹಂದ್ರ ಹಾಕಲಾಗುತ್ತದೆ. ಐದು ಘಂಟೆಯ ಸುಮಾರು ಐದು ಎತ್ತಿನ ನಗಗಳನ್ನು ನಡುತ್ತಾರೆ. ಅವು ನಾಲ್ಕು ಮೂಲೆಗಳಿಗೆ ಅಂದರೆ ಚೌಕಕಾರದಲ್ಲಿ ನೆಡಲಾಗುತ್ತದೆ. ಇನ್ನೊಂದು ನಗ ಎರಡರ ನಡುವೆ ಇರುತ್ತದೆ. ನಗಗಳಿಗೆ ತೆಂಗಿನ ಗರಿಗಳು ಮತ್ತು ಮಾವಿನ ಎಲೆಗಳನ್ನು ಕಟ್ಟುತ್ತರೆ. ಅದರಲ್ಲಿ ಬಲಗಡೆ ಇರುವ ನಗಕ್ಕೆ ದೀಪ ಹಚ್ಚುತ್ತಾರೆ. ಒಟ್ಟಿನಲ್ಲಿ ಹಂದ್ರ ನೋಡುವುದಕ್ಕೆ ಬಹಳ ಸುಂದರವಾಗಿ ಅಲಂಕೃತಗೊಂಡು ಮದುವೆ ಮನೆಯಾಗಿ ಕಾಣುತ್ತದೆ. ಸಂಜೆ ಹೆಣ್ಣಿನ ಕಡೆಯ ಬೀಗರು ಗಂಡಿನ ಮನೆಗೆ ಬರುತ್ತಾರೆ. ಹೆಣ್ಣಿನವರು ಬರಬೇಕಾದರೆ ೧೫, ೨೦ ಕತ್ತೆಗಳ ಮೇಲೆ ಸವಾರಿ ಮಾಡಿ ಬರುತ್ತಿದ್ದರು. ಊರಿಗೆ ಬಂದ ತಕ್ಷಣವೆ ಗಂಡಿನವರು ಭಾಜಿಯ ಸಂಭ್ರಮದೊಂದಿಗೆ ಹೆಣ್ಣಿನ ಕಡೆಯವರನ್ನು

ಊರಿನ ಹನುಮಂತದೇವರ ಗುಡಿಯೊಳಗೆ ಕೂಡಿಸಿ ಗಂಡಿನವರು ಹೆಣ್ಣಿನವರಿಗೆ ಮಸಿ ಊಟವಾಗಿ ರೊಟ್ಟಿ, ಗಟ್ಟಿಬೇಳೆ ನೀಡುತ್ತಾರೆ. ನಂತರ ಪದಗಳನ್ನು ಹಾಡುವುದರ ಮೂಲಕ ಬಿಡದಿ ಮನೆಗೆ ಕರೆದುಕೊಂಡು ಹೋಗುತ್ತಾರೆ.

**ಐರಣಿ ತರುವುದು:** ಕುಂಬಾರ ಮನೆಯಿಂದ ಐದು ಮಣ್ಣಿನ ಕೊಡ ತೆಗೆದುಕೊಂಡು ಬರುತ್ತಾರೆ. ಗಂಡಿನ ಮನೆಯವರು ಕೊಡ ತೆಗೆದುಕೊಂಡು ಬಂದವರಿಗೆ ಬಟ್ಟೆ ಕೊಡಿಸುತ್ತಾರೆ. ನಂತರ ವಾದ್ಯದೊಂದಿಗೆ ಬಾವಿಗೆ ಹೋಗಿ ನೀರು ತುಂಬಿಸಿಕೊಂಡು ತರುತ್ತಾರೆ. ಆ ಕೊಡ ನೀರನ್ನು ಹಂದ್ರದೊಳಗೆ ಇಟ್ಟು ಆ ಐದು ಕೊಡಗಳಿಗೆ ನೂಲನ್ನು ಸುತ್ತುತ್ತಾರೆ. ಇದರಲ್ಲಿ ಮದುಮಗ ಮತ್ತು ಮದುಮಗಳನ್ನು ಜೊತೆಯಲ್ಲಿ ಇವರಿಬ್ಬರ ತಂದೆತಾಯಿಯಂದಿರಿಗೂ ಜೊತೆಗೂಡಿಸಿ ನೀರನ್ನು ಹಾಕಲಾಗುತ್ತದೆ. ನೀರು ಹಾಕಿ ಸ್ನಾನದ ನಂತರ ಮದುಮಕ್ಕಳಿಗೆ ಹೊಸ ಬಟ್ಟೆಗಳನ್ನು ಹಾಗೂ ತಂದೆ ತಾಯಂದರಿಗೂ ಬಟ್ಟೆಗಳನ್ನು ನೀಡಲಾಗುತ್ತದೆ. ಮದುಮಕ್ಕಳನ್ನು ಹಂದ್ರದೊಳಗೆ ಕರೆದುಕೊಂಡು ಹೋಗಿ ಕೂಡಿಸಿ ತಾಳಿ ಕಟ್ಟುವ ಕಾರ್ಯಕ್ರಮ ಮಾಡುತ್ತಾರೆ. ನಂತರ ಹೊರಗೆ ಬಂದು ಅಕ್ಷತೆಯನ್ನು ಹಾಕಿಕೊಂಡು ಒಳಗೆ ಹೋಗುತ್ತಾರೆ. ತಾಳಿ ಕಟ್ಟಿದ ನಂತರ ಮದುವೆಗೆ ಬಂದಿರುವ ಎಲ್ಲಾ ಸಂಬಂಧಿಕರಿಗೂ ಮದುವೆಯ ಊಟವನ್ನು ಮಾಡಿಸಲಾಗುತ್ತದೆ.

ಮರುದಿನ ಚಾಪಿಕಟ್ಟಿ ಹಾಸಿ ಗಂಡಿನವರು ೫೦೦ ರೂ.ಗಳು ಇಟ್ಟರೆ ಹೆಣ್ಣಿನವರು ೨೫೦ ರೂ. ಇಡುತ್ತಾರೆ. ಇದರಿಂದ ಒಂದು ಬ್ಯಾಟಿಯನ್ನು ತೆಗೆದುಕೊಂಡು ಬಂದು ಮಾಂಸದಡುಗೆಯನ್ನು ಮಾಡಿಸಿ ಬಂದಿರುವ ಬೀಗರಿಗೂ ದೈವಕ್ಕೂ ಮಾಂಸದೂಟವನ್ನು ಹಾಕಿಸಿ ಬೀಳ್ಕೊಡುತ್ತಾರೆ. ಮಾಂಸದ ಊಟಕ್ಕೆ ಕೊರಮರು ಕುಕಡಿ ಬ್ಯಾಟಿ ಎಂದು ಕರೆಯುತ್ತಾರೆ. ಮದುಮಗ ಮದುಮಗಳನ್ನು ಕರೆದುಕೊಂಡು ಹೋಗಿ ಹೆಣ್ಣಿನ ಮನೆ ಯನ್ನು ತುಂಬಿಸಿ ಕೊಡುತ್ತಾರೆ. ಗಂಡಿನ ಕಡೆಯವರು ಮದುಮಗಳ ಹಿಂದೆ ಬಂದಿರುವ ಹೆಣ್ಣಿಗೆ ಸೀರೆ ಕುಪ್ಪಸವನ್ನು ನೀಡುತ್ತಾರೆ.

**ಚಾಜ ಪದ್ಧತಿ:** ಮದುವೆಯ ಸಂದರ್ಭದಲ್ಲಿ ವರ ಅಥವಾ ವಧುವಿಗೆ ಯಾವುದೇ ಭಾಗವು ಊನವಾದರೆ ಅಂಥವರಿಗೆ ಚಾಜ ಇರುವುದಿಲ್ಲ. ಉದಾಹರಣೆಗೆ ಹೆಣ್ಣಿಗೆ ಕಣ್ಣೋ, ಕಾಲೋ, ಕೈಯೊ ಇರದಿದ್ದರೆ ಅಂಥವರನ್ನು ಮದುಮಗನ ಜೊತೆ ಕೂಡಿಸದೆ ಬೇರೆ ಕಡೆ ಕೂಡಿಸಿ ನೀರು ಹಾಕಲಾಗುತ್ತದೆ. ಮತ್ತು ಅಂಥವರಿಗೆ ಯಾವುದೇ ಚಾಜ ಮಾಡಬೇಕಾದರೆ, ಚಾಜ ಕಳೆದುಕೊಂಡವರೆ ಮಾಡಬೇಕು ಎಂದಿದೆ. ಹೆಣ್ಣಾಗಲಿ ಗಂಡಾಗಲಿ ಯಾವುದೇ ತರಹದ ಮಾನ್ಯತೆ ಕೊಡುವುದಿಲ್ಲ.

### ಮದುವೆಯ ಕ್ರಮ

ಮದುವೆಯ ಮುಂದಿನ ದಿನವಾಗಿ ಪೂರ್ವಾಭಿಮುಖವಾಗಿ ಎರಡು ಗುಡಿಸಲು ಗಳನ್ನು ಹಾಕುತ್ತಾರೆ. ಬಲಭಾಗದ್ದು ಗಂಡಿನ ಗುಡಿಸಲಾದರೆ, ಎಡಭಾಗದ್ದು ಹೆಣ್ಣಿನ ಕಡೆಯವರದ್ದು. ಎರಡೂ ಕಡೆಯವರು ತಮ್ಮ ತಮ್ಮ ಚಪ್ಪರಗಳಲ್ಲಿಯೇ ಮದುವೆಯ

ಕಾರ್ಯದ ಕೆಲಸಗಳನ್ನು ಆರಂಭಿಸುತ್ತಾರೆ. ಕೊರಮ ಬುಡಕಟ್ಟಿನವರು ಹಿಂದೆ ಐದು ದಿನಗಳವರೆಗೆ ಅದ್ದೂರಿಯಿಂದ ಮದುವೆ ಮಾಡುತ್ತಿದ್ದರಂತೆ. ಧಾರೆಗೆ ನಿರ್ದಿಷ್ಟವಾದ ವಾರವೇ ಆಗಬೇಕೆಂಬ ನಿಯಮವೇನೂ ಇವರಲ್ಲಿ ಕಂಡುಬರುವುದಿಲ್ಲ. ಮೊದಲನೆಯ ದಿನ ಮದುವಣಿಗ ಶಾಸ್ತ್ರ ಪ್ರಾರಂಭವಾದರೆ ಮಾರನೆಯ ದಿನವೂ ಅರಿಷಿಣ, ಎಣ್ಣೆ ಹಚ್ಚುವ ಶಾಸ್ತ್ರ ಮಾಡುತ್ತಿದ್ದರಂತೆ. ಮೂರನೆಯ ದಿನ ಧಾರೆ, ನಾಲ್ಕನೆಯ ದಿನ ನಾಗೋಳಿ, ಐದನೆಯ ದಿನ ಹೆಣ್ಣು ಕಳಿಸುವ ಶಾಸ್ತ್ರದಿಂದ ಮದುವೆ ಕೊನೆಗಾಣುತ್ತಿತ್ತು. ಈ ಐದು ದಿನಗಳವರೆಗೆ ಬಂಧುಗಳು, ಕುಲಸ್ಥರು ಒಂದು ಕಡೆ ಸೇರಿ ಹೆಂಡ, ಖಂಡಗಳ ಸಮೃದ್ಧಿಯೊಂದಿಗೆ ಅದ್ದೂರಿಯಾಗಿ ಮದುವೆ ಮಾಡುತ್ತಿದ್ದರು.

ಮದುವೆಯಲ್ಲಿ ಮೊದಲು ಚಪ್ಪರ ಹಾಕುತ್ತಾರೆ. ಚಪ್ಪರಗಳನ್ನು ಗಂಡು ಹೆಣ್ಣಿನ ಮನೆಗಳ ಮುಂದೆ ಹಾಕುತ್ತಾರೆ. ಐದು ಇಲ್ಲವೆ ಒಂಭತ್ತು ಅಥವಾ ಬೆಸ ಸಂಖ್ಯೆಗಳ ಕಂಬಗಳನ್ನು ನೆಡುತ್ತಾರೆ. ಐದು ಕಂಬಗಳ ಚಪ್ಪರದಲ್ಲಿ ನಾಲ್ಕು ಕಂಬಗಳನ್ನು ಚೌಕವಾಗಿ ನೆಟ್ಟು ಐದನೆಯದನ್ನು ಅವುಗಳ ಮಧ್ಯೆ ನೆಡುತ್ತಾರೆ. ಇದನ್ನು ಹಾಲುಗಂಬವೆಂದು ಕರೆಯುತ್ತಾರೆ. ಹಾಲುಗಂಬದ ಮುಂದೆಯೇ ಧಾರೆ ಶಾಸ್ತ್ರಗಳು ನಡೆಯುತ್ತವೆ.

ಮೊದಲ ದಿನ ಮುಂಜಾನೆ ತಾಟು, ತೆರವು ಕೊಡುವುದು ನಡೆದರೆ, ಸಂಜೆ ತಮ್ಮ ತಮ್ಮ ಗುಡಿಸಲುಗಳಲ್ಲಿಯೇ ಗಂಡು ಹೆಣ್ಣಿಗೆ ಬೇರೆ ಬೇರೆಯಾಗಿಯೆ ಅರಿಷಿಣ ಹಚ್ಚಿ ಎರೆಯುವ ಕಾರ್ಯ ನಡೆಯುತ್ತದೆ. ಎರಡನೆಯ ದಿನ ಮುಂಜಾನೆ ಗಂಡಿನ ಗುಡಿಸಲೊಳಗೆ ಇಬ್ಬರಿಗೂ ಕೂಡಿಸಿ ಅರಿಷಿಣ ಹಚ್ಚಿ ನೀರೆರೆಯುವ ಶಾಸ್ತ್ರ ಮಾಡುತ್ತಾರೆ. ಸಂಜೆ ಒಳಗೆ ಶ್ಯಾಸೆ ಕಟ್ಟೆಯಮೇಲೆ ಕೂಡಿಸಿ ಹಾಡಿ ಹರಸುತ್ತಾರೆ. ಮೂರನೆಯ ದಿನ ಮದುವೆ ಚಪ್ಪರಕ್ಕೆ ತಾಯೊಳಕು (ತಾಯಿದೀಪ) ಇಟ್ಟ ಮೇಲೆ ಧಾರೆ ಪ್ರಾರಂಭವಾಗುತ್ತದೆ. ಗಂಡಿನ ಕೈಗೆ ವೀಳ್ಯೆದೆಲೆಯಲ್ಲಿ ಬಾಳೆಹಣ್ಣೊಂದನ್ನಿಟ್ಟು ಕೈಮೇಲೆ ನೀರು ಹಾಕುತ್ತಾರೆ. ಆತ ನಿಂತಲ್ಲಿಯೇ ಪ್ರದಕ್ಷಿಣೆ ಹಾಕುತ್ತಾ ದೇವರನ್ನು ಸ್ಮರಿಸುತ್ತಾ ಧಾರೆಯ ಹಸೆಯ ಮೇಲಿನ ಮಣೆಗೆ ಬರುತ್ತಾನೆ. ಒಂದು ಬಿಳಿ ಬಟ್ಟೆಯ ಪರದೆಯನ್ನು ಅಡ್ಡ ಹಿಡಿದು ಗಂಡು ಹೆಣ್ಣನ್ನು ಎದಿರುಬದಿರಾಗಿ ನಿಲ್ಲಿಸುತ್ತಾರೆ. ನೇರವಾಗಿ ಗಂಡು ಹೆಣ್ಣು ಒಬ್ಬರ ಮುಖವನ್ನೊಬ್ಬರು ನೋಡುವಂತಿಲ್ಲ. ಕುಲದ ಹಿರಿಯರೊಬ್ಬರು ಧಾರೆ ಸಮಯದಲ್ಲಿ ಪುರೋಹಿತರ ಕೆಲಸ ಮಾಡುತ್ತಾರೆ. ದೈವದ ಎದುರು ಇಬ್ಬರನ್ನೂ ಶ್ಯಾಸಿಕಟ್ಟೆಯ ಮೇಲೆ ಕೂಡಿಸುತ್ತಾರೆ. ಹಿರಿಯರ ಸಮ್ಮುಖದಲ್ಲಿ ಗಂಡು ಹೆಣ್ಣಿಗೆ ತಾಳಿ ಕಟ್ಟುತ್ತಾನೆ. ಎಲ್ಲರೂ ಅಕ್ಕಿಕಾಳು ಹಾಕುವರು. ಇಲ್ಲಿಗೆ ಮದುವೆ ಮುಗಿದಂತೆ. ಐದು ದಿವಸ ಇಡೀ ಸಮಾಜದವರಿಗೆ ಊಟೋಪಚಾರ ಹಾಗೂ ಹೆಂಡ, ಖಂಡದ ಸಮಾರಾಧನೆ ನಡೆಯುತ್ತದೆ.

ಮದುವೆಯ ಮಾರನೆ ದಿನ ನಾಗೋಳಿ ಶಾಸ್ತ್ರ ಮತ್ತು ಇತರೆ ಆಚರಣೆಗಳು ನಡೆಯುತ್ತವೆ. ಮದುವೆಯ ಚಪ್ಪರದಲ್ಲಿ ಹಸೆ ಬರೆಯುತ್ತಾರೆ. ಹಸೆಯ ಮೇಲೆ ಗಂಡು ಹೆಣ್ಣನ್ನು ಅಕ್ಕಿ ಎರಚುವ ಶಾಸ್ತ್ರ ಮತ್ತೆ ನಡೆಯುತ್ತದೆ. ಆದರೆ ಈ ಸಂದರ್ಭದಲ್ಲಿ

ಅಕ್ಕಿ ಎರಚುವ ಮೊದಲೇ ಗಂಡು ಹೆಣ್ಣು ಪರಸ್ಪರ ಅಕ್ಕಿ ಎರಚಿಕೊಳ್ಳುತ್ತಾರೆ. ಇದೇ ಹಸೆಯ ಮೇಲೆಯೇ ಮಗು ತೂಗುವ ಶಾಸ್ತ್ರವೂ ನಡೆಯುತ್ತದೆ. ಇದರ ಉದ್ದೇಶ ಹೆಣ್ಣು ಮೊದಲಿಗೆ ಗಂಡು ಮಗುವನ್ನು ಹೆತ್ತು ಸುಖವಾಗಿರಲಿ ಎಂಬುದಾಗಿದೆ. ಐದು ಜನ ಮುತ್ತೈದೆಯರು ಮಂಗಳಾರತಿ ಮಾಡುತ್ತಾರೆ. ಅಕ್ಕಿ ಎಸೆಯುವುದು ನಡೆಯುತ್ತಿರುವಾಗ ಮೇಲುದನಿಯಲ್ಲಿ ಸೋಬಾನೆಯನ್ನು ಹಾಡುತ್ತಾರೆ. ಅಷ್ಟರಲ್ಲಿ ಓಕಳಿ ಆಟಕ್ಕೆ ಸಿದ್ಧ ಮಾಡುತ್ತಾರೆ. ಈ ಸಂದರ್ಭದಲ್ಲಿ ಗಂಡು ಹೆಣ್ಣಿಗೆ ಅರಿಷಿಣ ಎಣ್ಣೆ ಹಚ್ಚುವಾಗ ಹಾಕಿದ್ದ ಬಟ್ಟೆಗಳನ್ನೇ ತೊಡಿಸುತ್ತಾರೆ. ಧಾರೆಯ ದಿನ ತಂದ ಅರಣಿ (ಐರಾಣಿ)ಗಡಿಗ ಮತ್ತು ಒತ್ತು ಗಡಿಗೆಯ ನೀರನ್ನು ಹಾಕುತ್ತಾರೆ. ಐದು ಬಾರಿ ಒಬ್ಬರ ಮೇಲೊಬ್ಬರನ್ನು ಬಾಗಿ ನಿಲ್ಲಿಸಿ ನೀರು ಹಾಕಿ ನಂತರ ಸ್ನಾನ ಮಾಡಿಸುತ್ತಾರೆ.

ನಾಗೋಳಿಶಾಸ್ತ್ರದ ಮಾರನೆಯ ದಿನ ಮದುವೆ ಚಪ್ಪರದಲ್ಲಿ ಹಸೆಹಚ್ಚಿ ಗಂಡು ಹೆಣ್ಣನ್ನು ಕೂರಿಸಿ ಬಂಧುಬಳಗದವರೆಲ್ಲರೂ ಮುಯ್ಯಿ ಮಾಡುತ್ತಾರೆ. ಅಂದೇ ಹೆಣ್ಣನ್ನು ಗಂಡನ ಮನೆಗೆ ಕಳಿಸಿಕೊಡುವ ಶಾಸ್ತ್ರ ಮಾಡುತ್ತಾರೆ. ಮದುವೆ ಮುಗಿಯುವುದರೊಳಗೆ ಒಂಭತ್ತು ಹಸೆ ಹಚ್ಚುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಐದು ದಿನದ ಮದುವೆಗಳು ನಡೆಯುತ್ತಿಲ್ಲ. ಮೂರು ದಿನಕ್ಕೆ ಮದುವೆಗಳು ಸೀಮಿತಗೊಂಡಿವೆ.ಇವರಲ್ಲಿ ವಿಧವೆಯರು, ಮರು ವಿವಾಹವಾದವರು ವಿವಾಹ ಮಂಟಪವನ್ನು ಪ್ರವೇಶಿಸುವಂತಿಲ್ಲ. ಇದರಿಂದಾಗಿ ಹೆಣ್ಣಿಗೆ ಅಶುಭವಾಗುತ್ತದೆಂಬ ನಂಬಿಕೆ ಇವರಲ್ಲಿದೆ.

**ಪ್ರಸ್ಥ:** ಮದುವೆಯಾದ ಐದನೆಯ ದಿನದಂದು ತಮ್ಮ ಮನೆಯ ದೇವರಿಗೆ ಕಾಯಿ ಒಡೆದು ಆ ದಿನಾ ರಾತ್ರಿ ಇಬ್ಬರು ಸಂಗಾತಿಗಳು ಒಂದೇ ಕಡೆ ಮಲಗಿಸುತ್ತಾರೆ. ಹಾಸಿಗೆ ಹಾಸುವ ಶಾಸ್ತ್ರವನ್ನು ಗಂಡಿನ ತಂಗಿಯರು ಅಥವಾ ಚಿಕ್ಕಮ್ಮಂದಿರು ಮಾಡುತ್ತಾರೆ. ನಂತರ ಬೆಳಗ್ಗೆ ಎದ್ದು ಬರುವಾಗ ಮದುಮಗ ಹಾಸಿಗೆಯ ಮೇಲೆ ಹತ್ತುರೂಪಾಯಿ ಇಟ್ಟು ಬರುತ್ತಾನೆ. ರಾತ್ರಿ ಹಾಸಿಗೆ ಹಾಸಿದವರು ಆ ಹತ್ತು ರೂ. ತೆಗೆದುಕೊಳ್ಳುತ್ತಾರೆ. ತರುವಾಯ ಇಬ್ಬರೂ ಸ್ನಾನ ಮಾಡಿದ ಮೇಲೆ ಕೊಬ್ಬರಿ ಬೆಲ್ಲ ಕುಟ್ಟಿಕೊಡುತ್ತಾರೆ.

**ವಿವಾಹದ ವಿಧಗಳು:** ಕೊರಮರಲ್ಲಿ ಹಲವು ಬಗೆಯ ವಿವಾಹ ಕ್ರಮಗಳನ್ನು ಕಾಣಬಹುದು. ಕೂಡಿಕೆ ಮದುವೆ, ವಿಧವಾ ವಿವಾಹಗಳು ಚಾಲತಿಯಲ್ಲಿರುವುದನ್ನು ಕಾಣಬಹುದಾಗಿದೆ. ಕೊರಮ ಸಮುದಾಯದಲ್ಲಿ ಏಕಪತ್ನಿತ್ವ ಜಾರಿಯಲ್ಲಿದೆ. ಒಂದು ವೇಳೆ ಬಹುಪತ್ನಿತ್ವವಾಗಬೇಕಾದರೆ ಹೆಂಡತಿಯ ಅಪ್ಪಣೆ ಪಡೆಯಲೇಬೇಕು. ಮೊದಲ ಹೆಂಡತಿಗೆ ಮಕ್ಕಳಾಗದಿದ್ದರೆ, ವಾರಸುದಾರರ ಸಲುವಾಗಿ ಮತ್ತೊಂದು ಮದುವೆ ಯಾಗುವರು.ಆದರೆ ಮೊದಲ ಹೆಂಡತಿಯ ಅನುಮತಿಯಿಲ್ಲದೆ ಎರಡನೆಯ ಮದುವೆಗೆ ಅವಕಾಶವಿರುವುದಿಲ್ಲ ಹಾಗೆ ಇವರಲ್ಲಿ ಬಹುಪತಿತ್ವಕ್ಕೆ ಅವಕಾಶವಿಲ್ಲ. ಹಾಗೆ ಕೊರಮ ಸಮುದಾಯದಲ್ಲಿ ಅಂತರ್ಜಾತಿಯ ವಿವಾಹಕ್ಕೆ ಅವಕಾಶವಿಲ್ಲ. ಒಂದುವೇಳೆ ಈ ಸಮುದಾಯದ ಹುಡುಗನು ಬೇರೊಂದು ಸಮುದಾಯದ ಹುಡುಗಿಯನ್ನು ಮದುವೆ

ಯಾದರೆ ಅಂಥವರಿಗೆ ಕುಲದಿಂದ ಹೊರಗೆ ಇಡಲಾಗುತ್ತದೆ. ಯಾವುದೇ ಕಾರ್ಯ ಕ್ರಮಗಳಲ್ಲಿ ಅವರು ಭಾಗವಹಿಸುವಂತಿಲ್ಲ. ಒಟ್ಟಾರೆಯಾಗಿ ಅವರನ್ನು ಕುಲ ಸಮುದಾಯ ದಿಂದ ಬಹಿಷ್ಕರಿಸಲಾಗುತ್ತದೆ.

**ಕೂಡಿಕೆ:** ಕೊರಮ ಬುಡಕಟ್ಟಿನಲ್ಲಿ ಕೂಡಿಕೆಗಳಿಗೆ ಅವಕಾಶವುಂಟು. ಗಂಡಿನ ಮರು ಮದುವೆಗೆ ಇವರಲ್ಲಿ ಯಾವುದೇ ರೀತಿಯ ನಿಷೇಧವಿಲ್ಲ. ಆದರೆ ಹೆಣ್ಣಿನ ಮರು ಮದುವೆಗೆ ಮದುವೆ ಎಂದು ಕರೆಯುವುದಿಲ್ಲ. ಹಾಗೆಯೇ ಈ ಮದುವೆಯಲ್ಲಿ ಮದುವೆಯ ಯಾವ ಶಾಸ್ತ್ರಗಳೂ ನಡೆಯುವುದಿಲ್ಲ. ಈ ರೀತಿಯ ಮದುವೆಗೆ ಉಡಿಕೆ ಅಥವಾ ಸೀರುಡಿಕೆ ಎಂದು ಕರೆಯುತ್ತಾರೆ. ಇದು ಅತ್ಯಂತ ಸರಳವಾಗಿ ನಡೆಯುತ್ತದೆ. ಇದರಲ್ಲಿ ಹೆಂಡತಿ ಸತ್ತವನು ಗಂಡ ಸತ್ತವಳನ್ನು, ಅಥವಾ ಗಂಡ ಬಿಟ್ಟವಳನ್ನು ಹೀಗೆ ಉಡಿಕೆ ಮದುವೆ ಮಾಡಿಕೊಳ್ಳುತ್ತಾರೆ. ಸೀರುಡಿಕೆಯು ಸಾಂಸಾರಿಕ ಜೀವನದಿಂದ ವಂಚಿತರಾದವರು, ಸಾಂಸಾರಿಕ ಜೀವನ ಸಾಗಿಸಲು ಕುಲದಿಂದ ಒಪ್ಪಿಗೆ ಪಡೆಯಲು ಮಾಡಿಕೊಂಡ ಒಂದು ಪದ್ಧತಿಯ ವಿವಾಹವಾಗಿದೆ.ಕೂಡಿಕೆಗಳನ್ನು ಮಾಡಿಕೊಳ್ಳದೆ ಗಂಡು ಹೆಣ್ಣುಗಳು ಹಾಗೆಯೇ ಜೀವನ ನಡೆದುಕೊಳ್ಳುತ್ತಿದ್ದರೆ, ಅದು ಅನೈತಿಕ ಸಂಬಂಧ ವಾಗುತ್ತದೆ. ಹಾಗೆಯೇ ಅದು ತಮ್ಮ ಕುಲಕ್ಕೆ ತಿಳಿದರೆ ದಂಡ ತೆರಬೇಕಾಗುತ್ತದೆ. ಗಂಡಸತ್ತ ಮೇಲೆ ಆಕೆ ಗಂಡನ ಅಣ್ಣ ತಮ್ಮಂದಿರನ್ನು ಮದುವೆಯಾಗುವ ಪದ್ಧತಿ ಈ ಸಮುದಾಯದಲ್ಲಿ ಕಂಡುಬರುವುದಿಲ್ಲ.

**ಕೋಷ್ಟಕ: ೪.೨**

**ಸಮೀಕ್ಷೆಗೊಳಪಟ್ಟ ಕೊರಮ ಸಮುದಾಯದ ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಾನಮಾನ | ಪುರುಷ | ಸ್ತ್ರೀ | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೨೨೪೦ | ೨೧೧೨ | ೪೩೫೨ |
| ಅವಿವಾಹಿತರು | ೧೧೩೦ | ೯೫೦ | ೨೦೮೦ |
| ವಿವಾಹಿತರು | ೮೯೦ | ೯೦೨ | ೧೭೯೨ |
| ವಿದುರ/ವಿದುವೆಯರು | ೧೯ | ೧೪೭ | ೧೬೬ |
| ಬೇರ್ಪಡೆಯಾದವರು | ೧ | ೩ | ೪ |

ಸಮೀಕ್ಷೆಗೊಳಪಟ್ಟ ಕೊರಮರ ಒಟ್ಟು ಜನಸಂಖ್ಯೆ ೪೨೫೨ ಇದರಲ್ಲಿ ವಿವಾಹಿತರ ಪ್ರಮಾಣವು ೪೪.೪೯ರಷ್ಟಿದೆ. ಇದರಲ್ಲಿ ವಿಧುರ,ವಿಧುವೆಯರು ಶೇಕಡ ೩.೯೧ಇದೆ.ಇನ್ನು ಗಂಡ, ಹೆಂಡತಿಯರಿಂದ ಬೇರ್ಪಡೆಯಾದವರ ಪ್ರಮಾಣವು ೦.೦೯ಇದೆ. ಅವಿವಾಹಿತರ ಪ್ರಮಾಣವು ೫೧.೫೧ ಕಂಡುಬರುವುದು.

## ೫

# ಆರಾಧನೆ ಆಚರಣೆ ನಂಬಿಕೆ

**ಜನನ, ನಾಮಕರಣ, ಋತುಮತಿ, ಸೀಮಂತ, ಮರಣ**

ಹುಟ್ಟಿನಿಂದ ಸಾಯುವತನಕ ಬದುಕಿನ ಪ್ರತಿ ಹಂತದಲ್ಲೂ ಸಂಪ್ರದಾಯ ಮತ್ತು ನಂಬಿಕೆಗಳಿಗೆ ಮನುಷ್ಯನು ಹೆಚ್ಚು ಮಹತ್ವವನ್ನು ಕೊಡುತ್ತಾನೆ. ಒಬ್ಬ ವ್ಯಕ್ತಿಯ ನಡತೆ, ಅಭ್ಯಾಸವನ್ನು ಸಂಪ್ರದಾಯವೆಂದು ಕರೆಯುವುದಿಲ್ಲ. ಅದರ ಬದಲು ಇಡೀ ಸಮುದಾಯವು ಪರಂಪಾರನುಗತವಾಗಿ ಅನುಸರಿಸುತ್ತಾ ಬಂದಿರುವ ಕ್ರಿಯಾ ಚಟುವಟಿಕೆ, ನೀತಿ ನಡವಳಿಕೆಗಳು ಸಂಪ್ರದಾಯವೆನಿಸಿ ಕೊಳ್ಳುತ್ತವೆ.

ಪ್ರತಿಯೊಂದು ಸಮುದಾಯವೂ ತಮ್ಮ ಬದುಕಿನ ನಾನಾ ಸಂದರ್ಭಗಳಿಗೆ ಒಂದು ವಿಶೇಷತೆಯನ್ನು ತಂದುಕೊಳ್ಳಲು ಅನೇಕ ರೀತಿಯ ಆಚರಣೆಗಳನ್ನು ಆಚರಿಸುತ್ತವೆ. ಹುಟ್ಟು ಸಾವು ಮಾನವ ಜೀವನದ ಎರಡು ಮಹತ್ವದ ಘಟನೆಗಳಾಗಿವೆ. ಹಬ್ಬ ಹರಿದಿನಗಳಷ್ಟೇ ಅಲ್ಲದೆ ಹುಟ್ಟು, ಮದುವೆ, ಸಾವು ಮುಂತಾದ ಸಂದರ್ಭಗಳಲ್ಲಿ ಕುಲಪದ್ಧತಿಗಳು ಆಚರಿಸಲ್ಪಡುತ್ತವೆ. ತಮ್ಮ ಅಲೆಮಾರಿತನ ಬದುಕಿನ ಅಲೆದಾಟದಲ್ಲಿ ಇವರು ಬದಲಾಯಿಸುವ ಪ್ರದೇಶಗಳ ಪ್ರಭಾವಕ್ಕನುಸಾರವಾಗಿ ಸಂಪ್ರದಾಯ, ಆಚಾರ, ವಿಚಾರ, ನಡವಳಿಕೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಾಣಬಹುದು.

**ಸೀಮಂತ:** ಕೊರಮ ಬುಡಕಟ್ಟಿನಲ್ಲಿ ಸೀಮಂತ ಕಾರ್ಯ ಇರಲಿಲ್ಲ. ಇತ್ತೀಚಿಗೆ ಅನ್ಯ ಸಮುದಾಯಗಳ ಪ್ರಭಾವದಿಂದಾಗಿ ಆರ್ಥಿಕವಾಗಿ ಬಲಾಢ್ಯರಾದವರು ಸೀಮಂತ ಕಾರ್ಯ ಮಡುವುದುಂಟು

**ಹೆರಿಗೆ:** ಎಲ್ಲಾ ಸಮುದಾಯಗಳಲ್ಲಿರುವಂತೆ ಇವರಲ್ಲೂ ಸಹ ಸಾಮಾನ್ಯವಾಗಿ ಚೊಚ್ಚಿಲ ಹೆರಿಗೆ ತವರಿನಲ್ಲೇ ನಡೆಯುತ್ತದೆ. ಹೆಂಡತಿಯು ಗರ್ಭಧರಿಸಿದ ಮೂರನೇ ತಿಂಗಳಲ್ಲಿ ಗಂಡಿನ ಮನೆಯವರು ತಮ್ಮ ಸೊಸೆ ಗರ್ಭ ಧರಿಸಿದ ವಿಷಯವನ್ನು ಹೆಣ್ಣಿನ ತೌರಿಗೆ ತಿಳಿಸುತ್ತಾರೆ. ಹೆಣ್ಣಿನ ಮನೆಯವರು ನಾಲ್ಕನೇ ತಿಂಗಳಲ್ಲಿ ಬಯಕೆ ಬುತ್ತಿ ತೆಗೆದುಕೊಂಡು ಹೋಗಿ ಮಗಳು ಬಯಕೆಯಂತೆ ತಿಂಡಿ ಪದಾರ್ಥಗಳನ್ನು ಕೊಟ್ಟು ಬರುತ್ತಾರೆ. ಏಳು ತಿಂಗಳು ತುಂಬಿದ ಬಳಿಕ ಬಸಿರೆ ಹೆಂಗಸನ್ನು ತವರಿಗೆ ಕರೆದುಕೊಂಡು ಹೋಗುತ್ತಾರೆ.

ಹೆರಿಗೆ ಬೇನೆ ಕಾಣಿಸಿಕೊಳ್ಳುತ್ತಿದ್ದಂತೆ ಆಕೆಗೆ ಹರಕು ಈಚಲು ಚಾಪೆ, ಹಳೆಯ

ಸೀರೆ, ಕೌದಿಯಿಂದ ಮರೆ ಮಾಡುತ್ತಾರೆ. ಬಿಡಾರದ ಮುದುಕಿಯರು ಹಾಗೂ ಕುಟುಂಬದ ಇನ್ನುಳಿದ ಹೆಣ್ಣುಮಕ್ಕಳು ಹೆರಿಗೆ ಮಾಡಿಸಲು ಮುಂದಾಗುತ್ತಾರೆ. ಈ ಸಂದರ್ಭದಲ್ಲಿ ಹಿರಿಯ ಮಹಿಳೆಯೇ ಸೂಲಗಿತ್ತಿಯಾಗಿ ಕಾರ್ಯ ನಿರ್ವಹಿಸುತ್ತಾಳೆ. ಗರ್ಭಿಣಿಯಾದವಳಿಗೆ ದಿನಗಳು ತುಂಬಿವೆ ಎಂದು ಗೊತ್ತಾದಾಗ ಸೂಲಗಿತ್ತಿಯ ಸಹಾಯದಿಂದ ಹೆರಿಗೆ ನಡೆಯುತ್ತದೆ. ಹೆರಿಗೆ ಆಗುವುದಕ್ಕಿಂತ ಸ್ವಲ್ಪ ಮೊದಲು ಬಸಿರೆ ಹೆಂಗಸಿಗೆ ಬಿಸಿ ನೀರನ್ನು ಕುಡಿಯಲು ಕೊಡುವರು. ಪ್ರಸವಕ್ಕೆ ತುಂಬಾ ಕಷ್ಟವಾದಾಗ ಸೂಲಗಿತ್ತಿ ಮಣ್ಣಿನ ಉಂಡೆಯನ್ನು ತಟ್ಟನೆ ಬಾಯಿಗೆ ಹಾಕಿ ತಿನ್ನುವಂತೆ ಹೇಳಿ ಅವಳ ಪ್ರಸವ ವೇದನೆಯನ್ನು ತಗ್ಗಿಸುತ್ತಾಳೆ. ಮಗು ಜನಿಸಿದ ತಕ್ಷಣ ಗುಡಿಸಿಲಿನ ಮುಂದೆ ಸಾಂಬ್ರಾಣಿ ಹೊಗೆಯನ್ನು ಹಾಕಿ ಸ್ವರ್ಗಸ್ಥರಾದ ಹಿರಿಯರ ಆತ್ಮಕ್ಕೆ ಬೆಲ್ಲವನ್ನು ಅರ್ಪಿಸುವರು. ಮಗುವನ್ನು ಆಕಳ ಗಂಜಲದಿಂದ ಒರೆಸಿ ಶುದ್ಧಗೊಳಿಸುವರು. ಮಗು ಹುಟ್ಟುವಾಗ ಅದರ ಹೊಕ್ಕಳ ಬಳ್ಳಿ ಕೊರಳಿಗೆ ಸುತ್ತಿಕೊಂಡಿದ್ದರೆ ಅದರ ತಂದೆ, ಸೋದರಮಾವನಿಗೆ ಅಶುಭವೆಂದು ನಂಬುತ್ತಾರೆ. ಇದನ್ನು ನಿವಾರಿಸಲು ಒಂದು ಹುಂಜವನ್ನು ಬಲಿ ಕೊಟ್ಟು ಅದರ ಕರುಳನ್ನು ಮಗುವಿನ ಕುತ್ತಿಗೆಗೆ ಹಾಕುವರು. ಅನಂತರ ಮಾಸದೊಂದಿಗೆ ಅದನ್ನು ಹೂಳಿಬಿಡುವರು. ಹಡೆದ ಮೂರು ದಿನಗಳವರೆಗೆ ಬಾಣಂತಿಗೆ ಸಪ್ಪೆಯ ಅನ್ನ, ಬಳ್ಳೊಳ್ಳಿ, ಅಜಿವಾನ ಕೊಬ್ಬರಿಯನ್ನು ತಿನ್ನಲು ಕೊಡುತ್ತಾರೆ. ನಾಲ್ಕನೆಯ ದಿನದಿಂದ ಕೆಲವರು ಹಂದಿಯ ಮಾಂಸವನ್ನು ನೀಡುವರು. ಮೂರು ದಿವಸದವರೆಗೆ ಪ್ರತಿದಿನವೂ ಬಾಣಂತಿಗೆ ಬಿಸಿ ನೀರಿನಿಂದ ಸ್ನಾನವನ್ನು ಮಾಡಿಸುತ್ತಾರೆ. ನಂತರ ಸೊಂಟಕ್ಕೆ ಚೆನ್ನಾಗಿ ಬಟ್ಟೆ ಬಿಗಿದು ಕಟ್ಟುತ್ತಾರೆ. ಒಲೆಯ ಮುಂದೆ ಕೂಡಿಸಿ ಕಂಬಳಿ ಇಲ್ಲವೇ ಹಳೆಯ ಚೀಲದ ತುಂಡಿನಲ್ಲಿ ಕಟ್ಟಿದ ಉಸುಕಿನ ಗಂಟಿನಿಂದ ಮೊಳಕಾಲಮಂಡಿ, ಸೊಂಟ, ನೆತ್ತಿ, ಅಂಗೈ, ಅಂಗಾಲು ಬೆರಳು ಹೀಗೆ ಸಂದು ಸಂದಿಗೆ ಕಾವು ಕೊಡಲಾಗುತ್ತದೆ. ಇದರಿಂದ ಬಾಣಂತಿಗೆ ಯಾವುದೇ ರೀತಿಯ ರೋಗಗಳು ಬರುವುದಿಲ್ಲವೆಂದು ಅವರ ನಂಬಿಕೆ. ಬಜೆ, ಹೂವಿನಕಾಳು, ಕಾಡುಜೀರಿಗೆ ಮುಂತಾದವುಗಳನ್ನು ಬಾಣಂತಿಗೆ ನೀಡುವರು

ಹೆರಿಗೆಯಾಗುತಿದ್ದಂತೆ ಚಾಕು, ಕುಡುಗೋಲು ಇಲ್ಲವೆ ಕತ್ತಿ, ಮಚ್ಚಿನಿಂದ ಹೊಕ್ಕಳು ಬಳ್ಳಿಯನ್ನು ಕತ್ತರಿಸುತ್ತಾರೆ. ಹುರಿ ಕೊಯ್ದ ಜಾಗಕ್ಕೆ ಅರಿಷಿಣ, ಎಣ್ಣೆ ಹಚ್ಚಿ ತಾಯಿ ಹತ್ತಿರ ಮಲಗಿಸುತ್ತಾರೆ. ಮಗು ಹುಟ್ಟಿದ ತಕ್ಷಣವೆ ತಾಯಿಯ ಹೊಟ್ಟೆಗೆ ನೀರು ಬಡೆಯುತ್ತಾರೆ. ಬಾಣಂತಿಯ ಮಾಸನ್ನು ತೆಗೆದುಕೊಂಡು. ಒಂದು ಹೊಸ ಗಡಿಗೆಯಲ್ಲಿ ಹಾಕಿ ಅದನ್ನು ಬಿಡಾರದ ಮುಂದೆ ಸಣ್ಣದೊಂದು ಕುಣಿ ತೋಡಿ ಹೂಳುತ್ತಾರೆ. ಹೂಳುವ ಮೊದಲು ಅರಿಸಿಣ ಕುಂಕುಮ ಇಟ್ಟು ಕಾಯಿ ಒಡೆದು, ಉಳ್ಳಾಗಡ್ಡಿ ಇಲ್ಲವೆ ನಿಂಬೆಹಣ್ಣು ಕೊಯಿದು ಬೇವಿನ ತೊಪ್ಪಲು ಹಾಕಿ ಪೂಜೆ ಸಲ್ಲಿಸಿ ಹೂಳುತ್ತಾರೆ. ಮಗು ಹುಟ್ಟಿದ ಮೂರನೆಯ ದಿನ ಇರ್ಲ್ ಪೂಜೆಮಾಡುತ್ತಾರೆ. ಈ ಪೂಜೆಗೆ ಕೋಳಿಯನ್ನು ಬಲಿಕೊಟ್ಟು ಮಾಸಿಗೆ ಕೋಳಿಯ ಖಂಡವನ್ನು ನೈವೇದ್ಯವಾಗಿ ಇಡುತ್ತಿದ್ದರು. ಮಗು

ಹುಟ್ಟಿದ ಐದನೇ ದಿವಸಕ್ಕೆ ಜೋಳದ ಹಿಟ್ಟಿನ ಪರಗಿಣ ಹಚ್ಚಿ ಜಳಕಮಾಡಿಸಿ ರಾತ್ರಿ ಸೆಟಿಗೆ(ಚುಟಿಗೆ)ಯನ್ನು ಇಡುತ್ತಾರೆ. ಚುಟಿಗೆಯನ್ನು ಸೂಲಗಿತ್ತಿ ಇಡುತ್ತಾಳೆ. ಸೂಲಗಿತ್ತಿಗೆ ಹುಡಿಯಲ್ಲಿ ಜೋಳವನ್ನು ಹಾಕಿ ಆಕೆ ಕೈಯಿಗೆ ಐದೂ ಹತ್ತೊ ರೂಪಾಯಿಯನ್ನು ಕೊಟ್ಟು ಕಳಿಸುತ್ತಿದ್ದರು.

ಯರುಕುಳರ ಬಗ್ಗೆ ಬರೆಯುವಾಗ ರೈಸ್ ಹೀಗೇ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೆಂಗಸಿಗೆ ಪ್ರಸವ ವೇದನೆ ಆರಂಭವಾದಾಗ ಅವಳು ವಿಷಯವನ್ನು ತನ್ನ ಗಂಡನಿಗೆ ತಿಳಿಸುವಳು. ಅವನು ತಕ್ಷಣ ಅವಳ ಕೆಲವು ಬಟ್ಟೆಗಳನ್ನು ತಾನು ತೊಟ್ಟುಕೊಂಡು ಹೆಂಗಸರು ಹಣೆಯ ಮೇಲೆ ಇಟ್ಟುಕೊಳ್ಳುವ ಕುಂಕುಮವನ್ನು ತಾನು ಇಟ್ಟುಕೊಂಡು ಒಂದು ಮಂದವಾಗಿ ಉರಿಯುವ ದೀಪವಿರುವ ಕೋಣೆಯೊಳಗೆ ಹೋಗಿ ಉದ್ದನೆಯ ಬಟ್ಟೆಯನ್ನು ಹೊದ್ದುಕೊಂಡು ಹಾಸಿಗೆಯ ಮೇಲೆ ಮಲಗಿಬಿಡುತ್ತಾನೆ. ಮಗು ಹುಟ್ಟಿದಾಗ ಅದನ್ನು ಚೆನ್ನಾಗಿ ತೊಳೆದು ತಂದೆಯ ಹಾಸಿಗೆಯ ಪಕ್ಕದಲ್ಲಿ ಮಲಗಿಸುತ್ತಾರೆ. ಇಂಗು, ಬೆಲ್ಲ ಮುಂತಾದ ವಸ್ತುಗಳನ್ನು ತಾಯಿಗೆ ಬದಲಾಗಿ ತಂದೆಗೆ ಕೊಡುವರು. ಅವನು ಕೇಳಿದ್ದನ್ನೆಲ್ಲಾ ಅಲ್ಲಿ ತಂದುಕೊಡುವರು.

ಮಲಬಾರಿನ ಕೊರವರಲ್ಲಿ ಗರ್ಭಿಣಿ ಹೆಂಗಸಿಗೆ ಪ್ರಸವ ವೇದನೆ ಪ್ರಾರಂಭವಾದಾಗ ಅವಳನ್ನು ಹೊರಗಿನ ಅಂಗಳದ ಪ್ರತ್ಯೇಕ ಜೋಪಡಿಯಲ್ಲಿ ಇರಿಸುವರು. ಇಪ್ಪತ್ತೆಂಟು ದಿನಗಳವರೆಗೂ ಅವಳಿಗೆ ಪ್ರತ್ಯೇಕ ಉಪಚಾರವನ್ನು ಮಾಡಲಾಗುವುದು. ಇವರಲ್ಲಿ ಸಾವಿನ ಸೂತಕಕ್ಕಿಂತಲೂ ಈ ಜನನದ ಸೂತಕ ತುಂಬಾ ಕಠಿಣವಾದದು. ೨೮ ದಿನದ ನಂತರ ಕೊನೆಯಲ್ಲಿ ಅವಳಿದ್ದ ಗುಡಿಸಲನ್ನು ಸುಟ್ಟು ಹಾಕುತ್ತಾರೆ.

ನಾಮಕರಣ: ಮಗು ಹುಟ್ಟಿದ ಐದು, ಒಂಭತ್ತು ಅಥವಾ ಹನ್ನೆರಡನೆಯ ದಿನಕ್ಕೆ ನಾಮಕರಣದ ಶಾಸ್ತ್ರ ಇಟ್ಟುಕೊಳ್ಳುತ್ತಾರೆ. ಗೊತ್ತುಪಡಿಸಿದ ದಿನದಂದು ತಾಯಿ ಮತ್ತು ಮಗುವಿಗೆ ಸ್ನಾನ ಮಾಡಿಸಿ ಮನೆಯನ್ನು ಶುಚಿಗೊಳಿಸಿ ಸೂತಕ ಕಳೆದ ನಂತರ ಹೆಸರಿಡುವ ಶಾಸ್ತ್ರ ನಡೆಯುತ್ತದೆ. ಹೆಸರಿಡುವಾಗ ಮಗುವಿನ ಕೈಗೆ ಕಂಕಣವನ್ನು ಕಟ್ಟಲಾಗುತ್ತದೆ. ಇದು ಮಗು ಸಮುದಾಯಕ್ಕೆ ಪ್ರವೇಶ ಪಡೆದಿದ್ದರ ಸಂಕೇತ ಎನ್ನುತ್ತಾರೆ. ಮಗುವಿಗೆ ಹೆಸರಿಡುವ ಕೆಲಸ ಆ ಮಗುವಿನ ಸೋದರ ಮಾವನದಾಗಿರುತ್ತದೆ. ಮಗುವನ್ನು ಬಿದಿರಿನ ತೊಟ್ಟಿಲಿಗೆ ಹಾಕಬೇಕಾದರೆ ಆ ತೊಟ್ಟಿಲಿಗೆ ಮೂರು ಬಾರಿ ಸಗಣಿಯನ್ನು ತುಂಬಿ ತಿಪ್ಪೆಗೆ ಹಾಕಿ ನಂತರ ಆ ತೊಟ್ಟಿಲಿಗೆ ಮಗುವನ್ನು ಹಾಕಿದ ಮೇಲೆ ಅದರ ಸೋದರ ಮಾವನಿಂದ ನಾಮಕರಣ ಮಾಡಿಸಲಾಗುತ್ತದೆ.

ಕೊರಮ ಬುಡಕಟ್ಟಿನಲ್ಲಿ ಮಕ್ಕಳಿಗೆ ದೇವರ ಹೆಸರನ್ನು ಇಡುತ್ತಾರೆ. ಅದು ಗಂಡಾಗಿದ್ದರೆ, ಸುಂಕ, ಗಂಗ, ದುರಗ, ಕರಿಯ, ಹನಮ, ಯಂಕ ಎಂಬುದಾಗಿ ಹೆಣ್ಣಾಗಿದ್ದರೆ, ಸುಂಕಿ, ಗಂಗಿ, ದುರಗಿ, ಕರೆವ್ವ, ಕಾಳಿ, ನಾಗಿ, ಹನಮಿ ಎಂಬಿತ್ಯಾದಿಯಾಗಿ ಕರೆಯುತ್ತಾರೆ. ಇದೇ ಹೆಸರುಗಳು ಮುಂದೆ ತಮ್ಮ ಭಾಷೆಯಲ್ಲಿ ರಾಮುಡು, ಲಚ್ಚಿಗಾಡು, ವೆಂಕಗಾಡು, ಗ್ರಂಗುಡು, ಸುಬ್ಬುಡು, ಅಂಕಲಿಗಾಡು ಎಂದಾಗುತ್ತದೆ. ವ್ಯಕ್ತಿಯ ಆಕಾರ,

ಬಣ್ಣಗಳಿಗೆ ಹೊಂದಿಕೊಳ್ಳುವ ಹೆಸರುಗಳು ಕಾಲಾನುಕ್ರಮದಲ್ಲಿ ರೂಢಿಯಾಗಿಬಿಡುತ್ತದೆ. ತೆಲುಗ ಮಾತನಾಡುವ ಕಡೆ ಕಪ್ಪಗಿರುವ ಮಗುವಿಗೆ ನಲ್ಲವಾಡು, ಕುಳ್ಳಗಿರುವ ಕೂಸಿಗೆ ಪೊಟ್ಟಿಗಾಡು, ಉದ್ದ ಕಾಲನ್ನು ಹೊಂದಿದ ಮಗುವಿಗೆ ನೆಟ್ಟಿಕಲಾಡು, ಕುಂಟನನ್ನು ಕುಂಟಾಡು, ಜುಟ್ಟು ಬಿಟ್ಟವನನ್ನು ಜುಟ್ಟುವಾಡು ಹೀಗೆ ನಾನಾ ರೀತಿಯಲ್ಲಿ ಅವರ ವ್ಯಕ್ತಿತ್ವಗಳಿಗನುಸಾರವಾಗಿ ಹೆಸರು ಪಡೆದುಕೊಳ್ಳುತ್ತದೆ.

**ಋತುಮತಿ :** ಕೊರವರ ಹುಡುಗಿ ಮೈನೆರೆದರೆ ತಮ್ಮ ಚಪ್ಪರದ ಮೂಲೆಯೊಂದರಲ್ಲಿ ಕೂಡಿಸುತ್ತಾರೆ. ಮೈನೆರೆದ ಹೆಣ್ಣು ಮನೆಯೊಳಗೆ ಓಡಾಡುವಂತಿಲ್ಲ. ಮನೆಯ ಯಾವುದೇ ಕೆಲಸಗಳನ್ನು ಮಾಡುವಂತಿಲ್ಲ ಹಾಗೂ ಯಾರನ್ನು ಮುಟ್ಟುವಂತಿಲ್ಲ, ಇದು ಒಂದು ರೀತಿಯಲ್ಲಿ ಸೂತಕವೇ ಆಗಿರುತ್ತದೆ. ಹೆಣ್ಣಿನ ತಾಯಿ ಸೋದರತ್ತೆ ಮೈನೆರದ ಹುಡುಗಿಗೆ ನೀರು ಹಾಕುತ್ತಾರೆ. ಅವರು ಹೇಳಿದ ಸಮಯಕ್ಕೆ ನೀರು ಹಾಕುತ್ತಾಳೆ. ನಂತರ ಗೋಧಿ ರವೆಗೆ ಶುಂಠಿ, ಬೆಲ್ಲವನ್ನು ಹಾಕಿ ಗಂಜಿ ಮಾಡಿ  ಕುಡಿಯಲು ನೀಡುತ್ತಾರೆ. ಮೈನೆರೆದ ಹೆಣ್ಣಿನ ಸೋದರಮಾವಂದಿರು. ಋತುಮತಿಯಾದ ಹುಡುಗಿಯನ್ನು ಎಬ್ಬಿಸುವವರೆಗೂ ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಸ್ನಾನ ಮಾಡಿಸುವರು. ಈ ಸ್ನಾನ ಮಾಡಿದ ನೀರು ಬೇರೆ ಕಡೆ ಹರಿದು ಹೋಗದಂತೆ ತಗ್ಗು ತೆಗೆದಿರುತ್ತಾರೆ. ಊಟಕ್ಕಾಗಿ ಬಿಸಿ ಬಿಸಿಯಾದ ಹಾಗೂ ಖಾರ ಕಡಿಮೆ ಇರುವ ಆಹಾರವನ್ನು ಮತ್ತು ಕೊಬ್ರಿಕಾರವನ್ನು ಕೊಡುವರು. ಪ್ರತಿನಿತ್ಯ ಮುತ್ತೈದೆಯವರಿಂದ ಆರತಿ ಬೆಳಗಿ ಸೋಬಾನದ ಹಾಡುಗಳನ್ನು ಹಾಡಿಸುವರು. ಮೈನೆರೆದ ಹುಡಿಗಿಯನ್ನು ೫, ೭, ೯, ೧೧ ದಿನಗಳವರೆಗೆ ಕೂಡಿಸುತ್ತಾರೆ. ಎಬ್ಬಿಸುವ ಕೊನೆಯ ದಿನ ಉಡಿ ತುಂಬಿ ದಂಡಿಯನ್ನು ಕಟ್ಟುತ್ತಾರೆ. ಹಳ್ಳ, ನದಿಗೆ ತೆರಳಿ ಗಂಗೆ ಪೂಜೆಯನ್ನು ಮಾಡಿಕೊಂಡು ಬರುತ್ತಾರೆ. ಗಂಗೆ ಪೂಜೆಗಾಗಿ ಅನ್ನ, ಬೆಲ್ಲ, ಎಳ್ಳು, ಕಡ್ಲೆ, ಅಕ್ಕಿ, ತೆಂಗಿನಕಾಯಿ, ಕುಬಸದ ಕಣ, ಬಿಂದಿಗೆ ಇವೆಲ್ಲ ತೆಗೆದುಕೊಂಡು ಹೋಗಿ ಪೂಜಾ ಸ್ಥಳದಲ್ಲಿ ಐದು ಮಣ್ಣಿನ ಕುಪ್ಪೆಗಳನ್ನು ಇರಿಸಿ ಅದಕ್ಕೆ ಕುಂಕುಮ, ಅರಿಶಿಣ, ಹಾಕಿ ಪೂಜೆ ಮಾಡುತ್ತಾರೆ. ನಂತರ ಎಲೆ ಅಡಿಕೆಯೊಂದಿಗೆ ಪೂಜೆಗೆ ಇಟ್ಟಿರುವ ಐದು ಕುಪ್ಪೆಯ ಮಣ್ಣನ್ನು ಅದರಲ್ಲಿರಿಸಿ ಮೈನೆರೆದ ಹುಡುಗಿಯಿಂದ ಗಂಗೆಗೆ ಬಿಡುತ್ತಾರೆ. ತರುವಾಯ ನೀರು ತುಂಬಿರುವ ಬಿಂದಿಗೆಯನ್ನು ಋತುಮತಿ ಯಾದವಳು ತಲೆಯ ಮೇಲೆ ಹೊತ್ತು ತರುತ್ತಾಳೆ. ತಂದ ನೀರನ್ನು ಮನೆಯ ಬಾಗಿಲ ಬಳಿ ಸೋದರ ಮಾವ ಎರಡು ಊದಿನಕಡ್ಡಿಯನ್ನು ಬೆಳಗಿ ತೆಂಗಿನಕಾಯಿ ಒಡೆದು ತುಂಬಿದ ಬಿಂದಿಗೆಯನ್ನು ಇಳಿಸಿಕೊಳ್ಳುತ್ತಾನೆ. ಇನ್ನೂ ಕೆಲವರು ಹತ್ತಿರದ ದೇವಾಲಯಕ್ಕೆ ಹೋಗಿ ನಮಸ್ಕರಿಸಿ ಬರುವರು. ಅಂದು ಬಂದಂತಹ ಬಂಧು ಬಳಗಕ್ಕೆ ರಾತ್ರಿ ಹಂದಿ ಮಾಂಸದ ಅಡಿಗೆ ಮತ್ತು ಸಿಹಿ ಊಟೋಪಚಾರ, ಹೆಂಡವನ್ನು ಕುಡಿಸುತ್ತಾರೆ.

**ಮರಣ :** ಕೊರವರಲ್ಲಿ ಶವಸಂಸ್ಕಾರ ಪದ್ಧತಿಯು ಹಿಂದೂ ಧರ್ಮದಂತೆ ನಡೆದರೂ ಸಹ, ಅವರು ಆಚರಿಸುವ ಕೆಲ ವಿಧಿ ನಿಯಮಗಳು ಭಿನ್ನವಾಗಿರುತ್ತವೆ. ಯಾವ ಮನೆಯಲ್ಲಿ ಸಾವು ಸಂಭವಿಸುತ್ತದೆಯೋ ಆ ಮನೆಯ ಮುಂದೆ ಬೆಂಕಿ ಹಾಕುತ್ತಾರೆ.

ಸತ್ತ ವ್ಯಕ್ತಿಯ ಸುದ್ದಿಯನ್ನು ಆದಷ್ಟು ಬೇಗ ಹತ್ತಿರದ ಮತ್ತು ದೂರದ ಬಂಧು ಬಳಗಕ್ಕೆ ಹೇಳಿ ಕಳಿಸುತ್ತಾರೆ. ಹೆಣವನ್ನು ಅನಾವಶ್ಯಕವಾಗಿ ಹೆಚ್ಚು ಕಾಲ ಇಟ್ಟುಕೊಳ್ಳುವುದಿಲ್ಲ. ಕಾರಣ ಮನೆಯಲ್ಲಿ ಹೆಚ್ಚು ಕಾಲ ಹೆಣ ಇದ್ದರೆ ಮೈಲಿ ಹೆಚ್ಚಾಗುತ್ತದೆಂದು ತಿಳಿಯುತ್ತಾರೆ ಹೆಣವನ್ನು ಸ್ಮಾಶಾನಕ್ಕೆ ಸಾಗಿಸುವವರೆಗೆ ಮನೆಯಲ್ಲಿ ಒಲೆ ಹಚುವುದಿಲ್ಲ.

ಸಾಯುವ ವ್ಯಕ್ತಿಯನ್ನು ಜೀವ ಹೋಗುವುದಕ್ಕೆ ಮುಂಚಿತವಾಗಿ ಹೊರಕ್ಕೆ ತರುತ್ತಾರೆ. ಇವರಲ್ಲಿ ಯಾರೇ ಸಾಯಲಿ, ಯಾವ ವಯಸ್ಸಿನಲ್ಲಿಯೇ ಸಾಯಲಿ ಅವರನ್ನು ಮಲಗಿಸುತ್ತಾರೆ ಮತ್ತು ಶವಸಂಸ್ಕಾರಕ್ಕೂ ಹಾಗೇ ಒಯ್ಯುವರು. ಬಿಸಿ ನೀರಿನಿಂದ ಶವಕ್ಕೆ ಸ್ನಾನ ಮಾಡಿಸಿ ಗಂಡಸಾದರೆ ಹಣೆಗೆ ನಾಮ, ಹೆಂಗಸಾದರೆ ಕುಂಕುಮ ಇಡುತ್ತಾರೆ. ಗಂಡ ಸತ್ತಾಗ ಆತನ ಹೆಂಡತಿಯನ್ನು ಶವದ ಪಕ್ಕದಲ್ಲಿ ಕೂರಿಸಿ ಮಡಿಲಕ್ಕಿ ಹಾಕುತ್ತಾರೆ. ತವರಿನವರು ಹೊಸ ಬಟ್ಟೆಗಳನ್ನು ಕೊಡುತ್ತಾರೆ. ಹೆಂಡತಿ ಸತ್ತಾಗ ಆಕೆಯ ಗಂಡ ಶವದ ಪಕ್ಕದಲ್ಲಿರುತ್ತಾನೆ. ಆ ಸಮಯದಲ್ಲಿ ಶವಕ್ಕೆ ಪೂಜೆಯನ್ನು ಮಾಡುತ್ತಾರೆ. ಅದಕ್ಕೆ ಹೊಸ ಬಟ್ಟೆ ತೊಡಿಸುತ್ತಾರೆ. ಅನಂತರ ಶವದ ಜವಾಬ್ದಾರಿಯನ್ನು ಸತ್ತವನ ತಾಯಿಯ ತಮ್ಮ ಅಥವಾ ಸತ್ತವನ ಹೆಂಡತಿಯ ಅಣ್ಣ ತಮ್ಮಂದಿರು ಹೊರುತ್ತಾರೆ. ಇವರಿಗೆ ಹೊರೆ ಹೊರುವವರು ಎಂದು ಕರೆಯುತ್ತಾರೆ. ಈತ ಶವ ಮುಟ್ಟಿದ ನಂತರವೇ ಉಳಿದವರು ಶವ ಮುಟ್ಟುತ್ತಾರೆ. ಹೆಣವನ್ನು ಚಟ್ಟದ ಮೇಲಿಟ್ಟು ಸ್ಮಶಾನದ ಕಡೆ ಹೊತ್ತು ನಡೆಯುತ್ತಾರೆ. ಆ ದಿನ ಸಾವಿನ ಮನೆಯಲ್ಲಿ ಮತ್ತು ಆ ಮನೆಯ ಸೋದರ ಸಂಬಂಧಿಗಳ ಮನೆಗಳಲ್ಲಿ ಅಡುಗೆ ಮಾಡುವುದಿಲ್ಲ. ನೆಂಟರಿಷ್ಟರು ಊಟ ತಂದು ಕೊಡುತ್ತಾರೆ. ಕೊರಮರಲ್ಲಿ ಹೆಣವನ್ನು ಹೂಳುವ ಮತ್ತು ಸುಡುವ ಪದ್ಧತಿ ಇದೆ.

ಹೆಣವನ್ನು ಸ್ಮಶಾನಕ್ಕೆ ಸಾಗಿಸುವಷ್ಟರಲ್ಲಿ ಮೊದಲೆ ನಾಲ್ಕು ಜನ ಹೋಗಿ ಗುಂಡಿ ತೆಗೆದಿರುತ್ತಾರೆ. ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವ ಮೊದಲೆ ಮನೆಯ ಮುಂದೆ ಹಾಕಿದ ಬೆಂಕಿಯ ಪಕ್ಕದಲ್ಲಿ ಒಲೆಹೂಡಿ, ಹೊಸ ಮಡಕೆಯಲ್ಲಿ ಅನ್ನ ಮಾಡುತ್ತಾರೆ. ಇದನ್ನು ಕೂಳು ಎನ್ನುತ್ತಾರೆ. ಈ ಕೂಳಿನ ಮಡಕೆಯನ್ನು ತಂದೆ ಸತ್ತಾಗ ಹಿರಿಯ ಮಗನೂ, ತಾಯಿಸತ್ತಾಗ ಕಿರಿಯ ಮಗನೂ ಹಿಡಿದು ಹೆಣದ ಮುಂದೆ ನಡೆಯುತ್ತಾರೆ. ಉಳಿದವರು ಹೆಣವನ್ನು ಮುಟ್ಟುವುದಿಲ್ಲ. ಹೆಣವನ್ನು ಹೊತ್ತು ಬಂದವರು ಗುಂಡಿ ಸ್ವಲ್ಪ ದೂರ ಇರುವಾಗಲೆ ಹೆಣದ ಚಟ್ಟವನ್ನು ನೆಲಕ್ಕೆ ಇಳಿಸುತ್ತಾರೆ. ಈ ಚಟ್ಟ ಬಿದಿರಿನಿಂದ ಮಾಡಿದ್ದು, ಏಣಿಯಾಕಾರದಲ್ಲಿರುತ್ತದೆ. ಹೆಣದ ತಲೆಯ ಭಾಗದಲ್ಲಿ ಮೂರು ಕಲ್ಲುಗಳನ್ನಿಟ್ಟು ಅದರ ಮೇಲೆ ಕೂಳಿನ ಮಡಕೆಯನ್ನಿಟ್ಟು, ಕೂಳಿನ ಮಡಕೆ ಹಿಡಿದು ಬಂದವನು ತನ್ನ ಕೈಯಲ್ಲಿರುವ ಕೊಳ್ಳಿಯಿಂದ ಒಡೆಯುತ್ತಾನೆ. ನಂತರ ಕೂಳನ್ನು ನಾಲ್ಕು ದಿಕ್ಕಿಗೂ ಚೆಲ್ಲುತ್ತಾನೆ. ಆ ಮಡಕೆ ಒಡೆಯುವ ಕೊಳ್ಳಿಯನ್ನು ಆತ ಕೂಳು ಬೇಯಿಸಿದ ಒಲೆಯಿಂದಲೇ ತಂದಿರುತ್ತಾನೆ. ಆನಂತರ ಮೊದಲು ಹೆಣವನ್ನು ಹೊತ್ತವರೆ ಗುಂಡಿಯ ಹತ್ತಿರ ಹೊತ್ತು ತರುತ್ತಾರೆ.

ಸತ್ತವನ ಹಿರಿಯ ಮಗನು ಒಂದು ಗಡಿಗೆಯ ತುಂಬ ನೀರು ತರುತ್ತಾನೆ.

ಅದನ್ನು ಹೆಗಲ ಮೇಲೆ ಹೊತ್ತು ಶವದ ತಲೆಯ ಕಡೆಗೆ ನಿಲ್ಲುತ್ತಾನೆ. ಆಗ ಹೊರಿಹೊತ್ತ ಸೋದರಮಾವ ಕುಡುಗೋಲಿನಿಂದ ಗಡಿಗೆಯನ್ನು ತೂತು ಕಟೆಯುತ್ತಾನೆ. ನಂತರ ಗಡಿಗೆ ಹೊತ್ತವನು ಶವಕ್ಕೆ ಮೂರು ಸುತ್ತು ಹಾಕಬೇಕು. ಸೋದರಮಾವನಾದವನು ಪ್ರತಿ ಸುತ್ತಿಗೂ ತೂತು ಕಟೆಯಬೇಕು. ಕೊನೆಯ ಸುತ್ತಿಗೆ ಶವದ ಕಾಲ ಹತ್ತಿರ ಬಂದು ಪೂರ್ತಿಯಾಗಿ ಗಡಿಗೆ ಒಡೆಯಬೇಕು. ಈಗ ಗಡಿಗೆ ಹೊತ್ತವನು ಹಿಂದೆ ನೋಡದೆ ಮನೆಗೆ ಹೋಗಬೇಕು. ಪಂಚಕದಲ್ಲಿ ಸತ್ತಿದ್ದರೆ ಶವಸಂಸ್ಕಾರ ಮಾಡುವ ಸಂದರ್ಭದಲ್ಲಿ ಆ ಶವದ ಜೊತೆಯಲ್ಲಿ ಒಂದು ಕೋಳಿಯ ಮರಿ ಮತ್ತು ಗೋದಿ ಕಣಕದಿಂದ ತಯಾರಿಸಿದ ಒಂದು ಗೊಂಬೆಯನ್ನು ಸುಡುತ್ತಾರೆ. ಏಕೆಂದರೆ ಪಂಚಕದಲ್ಲಿ ಸತ್ತವರು ತಮ್ಮ ಜೊತೆಯಲ್ಲಿ ಮತ್ತೆ ಎರಡು ಆಹುತಿ ಒಯ್ಯುವರು ಎಂಬ ನಂಬಿಕೆ ಇರುವುದು. ಈ ಕಾರಣಕ್ಕಾಗಿ ಮುಂದೆ ಯಾರನ್ನೂ ಆಹುತಿ ಒಯ್ಯಬಾರದು ಎಂದು ತಿಳಿದು ಎರಡು ಜೀವಗಳನ್ನು ಬಲಿಕೊಡುವರು. ಇಲ್ಲಿ ಗೋದಿ ಕಣಕದ ಗೊಂಬೆಗೆ ಜೀವ ಇರುವುದಿಲ್ಲ. ಆದರೂ ಅದು ಜೀವದ ಸಂಕೇತವೆಂದು ನಂಬುತ್ತಾರೆ.

ಹೊರಿಹೊತ್ತವನು ಮತ್ತು ಗಡಿಗೆ ಹೊತ್ತವನು ಶವ ಸಂಸ್ಕಾರವಾದ ಮೂರು ದಿನಗಳವರೆಗೆ ಕೆಲವು ಕಟ್ಟಳೆಗಳನ್ನು ಪಾಲಿಸಬೇಕು. ಇವರಿಬ್ಬರು ಮನೆಯ ಒಳಗೆ ಹೋಗಬಾರದು ಮತ್ತು ಇವರನ್ನು ಯಾರು ಮುಟ್ಟಬಾರದು. ಒಂದು ವೇಳೆ ಮುಟ್ಟಿದರೆ ಅವರೂ ಸ್ನಾನಮಾಡಿಯೇ ಮನೆಯ ಒಳಗೆ ಪ್ರವೇಶಿಸಬೇಕು. ಇವರ ಊಟದ ಸಾಮಗ್ರಿ ಮತ್ತು ಹಾಸಿಗೆ ಹೊದಿಕೆಗಳೂ ಸಹ ಮನೆಯ ಹೊರಗಡೆಯೇ ಇರಬೇಕು. ಸವಸಂಸ್ಕಾರ ಮುಗಿದ ಮೂರು ದಿನದ ನಂತರ ಅವರನ್ನು ಒಳಗೆ ಕರೆದುಕೊಳ್ಳುವರು.

ಶವಸಂಸ್ಕಾರ ಮುಗಿಸಿ ಮರಳಿ, ಮನೆಗೆ ಬಂದ ನಂತರದಲ್ಲಿ ಬೀಗರಾಗುವವರು ಸತ್ತವನ ಗಂಡುಮಕ್ಕಳನ್ನು ಕರೆದು ಅವರ ಇಸಬಾಯಿ ತೊಳೆಸುತ್ತಾರೆ. ಇದನ್ನು ಪ್ರತಿಯೊಬ್ಬ ಬೀಗನು ಮಾಡಲೇಬೇಕು. ಸ್ವಲ್ಪ ಬೆಲ್ಲ ಅಥವಾ ಚಾ ಬಾಯಲ್ಲಿ ಹಾಕಿಕೊಂಡು ಉಗುಳಬೇಕು. ನಂತರ ನೀರು ಮುಕ್ಕಳಿಸಬೇಕು. ಈ ರೀತಿ ಎರಡು ಸಲ ಮಾಡಬೇಕು ಅಂದಾಗ ಬಾಯಿ ತೊಳೆದಂತೆ. ದೂರದ ಊರಿನವರು ಇದ್ದರೆ ಅವರೂ ಸಹ ಶವಸಂಸ್ಕಾರ ಮುಗಿದ ಮೇಲೆ ಎಷ್ಟೇ ದಿನಬಿಟ್ಟು ಬಂದರೂ ಬಾಯಿ ತೊಳೆಯಲೇಬೇಕು. ಈ ಬಾಯಿ ತೊಳೆಯದೆ ಇದ್ದರೆ ಅವರು ವಿಷದ ಕೂಳನ್ನೇ ತಿನ್ನುತ್ತಿರುತ್ತಾರೆ ಎಂಬ ನಂಬಿಕೆ ಅವರಲ್ಲಿ ಇರುತ್ತದೆ.

ಹಾಕುವ ಪದ್ಧತಿ : ಕೊರವರಲ್ಲಿ ಶವಸಂಸ್ಕಾರದ ನಂತರವೇ ಹಲವಾರು ಪದ್ಧತಿ ಅನುಸರಿಸುವುದನ್ನು ಕಾಣುತ್ತೇವೆ. ಅವುಗಳಲ್ಲಿ ಕೂಳ ಹಾಕುವ ಕಾರ್ಯ ಅತಿ ಮುಖ್ಯವಾಗಿರುತ್ತದೆ. ಶವಸಂಸ್ಕಾರದ ಮರುದಿನ ಮುಂಜಾನೆ ಏಳು ಗಂಟೆಯ ಸುಮಾರಿಗೆ ಹತ್ತು ಚಪಾತಿ, ಅನ್ನ, ಹುರಿದ ಶತ್ತಿ, ಒಂದು ತಂಬಿಗೆ ನೀರು ಮತ್ತು ಕುಳ್ಳಿನ ಬೆಂಕಿ ಇವುಗಳ ಸಮೇತ ರುದ್ರಭೂಮಿಗೆ ಹೊರಡುತ್ತಾರೆ. ಮೊದಲು ಶವ ಇಳಿಸಿದ ಸ್ಥಳದಲ್ಲಿ ಸ್ವಲ್ಪ ನೀರು ಸಿಂಪಡಿಸಿ ಒಂದು ಔಡಲ ಎಲೆ ಇಡುತ್ತಾರೆ. ಅದರಲ್ಲಿ ಎರಡು ಚಪಾತಿ,

ಸ್ವಲ್ಪ ಅನ್ನ ತತ್ತಿ ಇಡುತ್ತಾರೆ. ಸ್ವಲ್ಪ ದೂರದಲ್ಲಿ ಬೆಂಕಿ ಹಾಕಿ ಎಲ್ಲರೂ ಲೋಬಾನವನ್ನು ಹಾಕುತ್ತಾರೆ. ಇಲ್ಲಿಂದ ರುದ್ರಭೂಮಿಗೆ ಹೋಗಿ ಅಲ್ಲಿಯೂ ಸಹ ನಾಲ್ಕೂ ದಿಕ್ಕಿಗೆ ನಾಲ್ಕು ಎಡೆ ಮಾಡಿ ಇಡುತ್ತಾರೆ. ಲೋಬಾನ ಹಾಕಿದ ನಂತರ ಎಲ್ಲರೂ ರುದ್ರಭೂಮಿಗೆ ಸ್ವಲ್ಪ ದೂರದಲ್ಲಿ ಹೋಗಿ ಕುಳಿತುಕೊಳ್ಳುವರು. ಆಗ ಅಲ್ಲಿ ಇಟ್ಟಂಥ ಅನ್ನವನ್ನು ಕಾಗೆ ಬಂದು ತಿಂದು ಹೋಗಬೇಕು. ಅಂದರೆ ಮಾತ್ರ ಸತ್ತವನು ಯಾವುದೇ ಆಸೆಗಳನ್ನು ಇಟ್ಟುಕೊಳ್ಳದೆ ಬಳಗಕ್ಕೆ ಕೂಡಿದನು ಎಂದು ನಂಬುತ್ತಾರೆ. ಕಾಗೆ ಮುಟ್ಟುವುದು ಸ್ವಲ್ಪ ತಡವಾದರೆ ಇದ್ದವರು ತಮಗೆ ತಿಳಿದಂತೆ ಬೇಡಿಕೊಂಡು ಮತ್ತೆ ಊದು ಹಾಕುವರು. ಇಷ್ಟಾದರೂ ಕಾಗೆ ಮುಟ್ಟದೆ ಇದ್ದರೆ ಏನೋ ಆಸೆ ಇಟ್ಟುಕೊಂಡಿದ್ದಾನೆಂದು ತಿಳಿಯ ಲಾಗುತ್ತದೆ ಹಾಗೂ  ಹರಿಯುವ ನೀರಿನಲ್ಲಿ ಎಡೆಯನ್ನು ಬಿಡುವರು. ನೀರಿನಲ್ಲಿ ಮೀನಿನ ಮುಂಖಾಂತರವಾದರೂ ಬಳಗದಲ್ಲಿ ಕೂಡಿಕೊಳ್ಳಬೇಕೆಂಬುದು ಅವರ ನಂಬಿಕೆ. ಇಷ್ಟಾದ ನಂತರ ಎಲ್ಲರೂ ಮನೆಗೆ ಹಿಂತಿರುಗುತ್ತಾರೆ. ಮನೆಗೆ ಬಂದನಂತರ ಎಣ್ಣೆ ಮುಟ್ಟುವ ಪದ್ಧತಿ ಮಾಡುವರು. ಸ್ವಲ್ಪ ಸಗಣಿ ತೆಗೆದುಕೊಂಡು ಬಟ್ಟಲ ಆಕಾರ ಮಾಡುವರು. ಅದರಲ್ಲಿ ಗಾಣದ ಎಣ್ಣೆ ಹಾಕಿ ಮನೆಯ ಹೊರಗಡೆ ಇಡುತ್ತಾರೆ. ಆಗ ರುದ್ರಭೂಮಿಗೆ ಹೋಗಿ ಬಂದವರು ಒಬ್ಬೊಬ್ಬರಾಗಿ ತಮ್ಮ ಬಲಗೈ ಕಿರುಬೆರಳನ್ನು ಆ ಎಣ್ಣೆಯಲ್ಲಿ ಅದ್ದಿ ಹೊರಗೆ ಸಿಂಪಡಿಸಬೇಕು. ಈ ರೀತಿ ಮೂರು ಸಲ ಮಾಡಬೇಕು. ಈ ರೀತಿಯಾಗಿ ಎಲ್ಲರೂ ಮಾಡಿದ ನಂತರ ಕೊನೆಯಲ್ಲಿ ಸೋದರ ಮಾವನು ಮೊದಲು ತರುವಾಯ ಸತ್ತವನ ಹಿರಿಮಗನು ಮಾಡಿ ಅದನ್ನು ಎತ್ತಿಕಂಡು ಹಿಂದಕ್ಕೆ ಸರಿಯುತ್ತ, ಹಿಂದಕ್ಕೆ ಎಸೆಯಬೇಕು. ಇಲ್ಲಿಗೆ ಕೂಳು ಹಾಕುವ ಪದ್ಧತಿ ಮುಗಿಯುತ್ತದೆ.

**ಮೂರು ದಿನದ ಕಾರ್ಯ:** ಇದು ಮೂರನೇ ದಿನ ಮಾಡುವ ಒಂದು ಕಾರ್ಯ. ಇದು ಎರಡನೆ ದಿನದ ಪದ್ಧತಿಗಿಂತ ಸ್ವಲ್ಪ ಭಿನ್ನವಾಗಿದೆ. ಸತ್ತವನು ತನ್ನ ಜೀವನದಲ್ಲಿ ಉಪಯೋಗಿಸುತ್ತಿದ್ದ ಹಣ್ಣುಹಂಪಲು, ತಿಂಡಿತಿನಿಸುಗಳು, ಬೀಡಿ, ಸಿಗರೇಟು, ಸಾರಾಯಿ, ಮಾಂಸ, ಎಲೆಅಡಿಕೆ, ತಂಬಾಕು, ಅನ್ನ, ಚಪಾತಿ, ಮುಂತಾದ ವಸ್ತುಗಳನ್ನು ತೆಗೆದು ಕೊಂಡು ಸ್ಮಶಾನಕ್ಕೆ  ಹೋಗುತ್ತಾರೆ. ಈ ಕಾರ್ಯವನ್ನು ಮಾಡದಿದ್ದರೆ ಸತ್ತವನ ಆತ್ಮ ಹಠ ಹಿಡಿಯುತ್ತದೆ ಎಂಬುದು ಅವರ ನಂಬಿಕೆ.

ಎರಡನೆಯ ದಿನದಂತೆ ಅಂದು ಸಹ ಎಡೆಗಳನ್ನು ಹಾಕಿ ತೆಗೆದುಕೊಂಡು ಹೋದ ಪದಾರ್ಥಗಳನ್ನು ಹಂಚಬೇಕು. ನಂತರ ಬೆಂಕಿ ಮಾಡಿ ಲೋಬಾನ ಹಾಕಿ ಕಾಗೆ ಬಂದು ಮುಟ್ಟುವವರೆಗೂ ಕಾಯುತ್ತಾರೆ. ಯಾರಾದರೂ ಲೋಬಾನ ಹಾಕುವ ಸಮಯದಲ್ಲಿ ಕಾಗೆ ಮುಟ್ಟಿದರೆ ಅವರ ಮೇಲೆಯೇ ಸತ್ತವನ ಆಸೆ ಇತ್ತು ಎಂದು ಸಂತೋಷಪಡುತ್ತಾರೆ. ಒಂದು ವೇಳೆ ಕಾಗೆ ಬಾರದೆ ಇದ್ದರೆ ಮತ್ತೊಮ್ಮೆ ಎಲ್ಲರೂ ಲೋಬಾನ ಹಾಕಿ ತರುವಾಯ ಎರಡನೆ ದಿನದಂತೆ ಎಡೆಗಳನ್ನು ಒಯ್ದು ನೀರಿನಲ್ಲಿ ಬಿಡುತ್ತಾರೆ. ಹೆಣವನ್ನು ಸುಟ್ಟ ಪಕ್ಷದಲ್ಲಿ ಬೂದಿ ಮತ್ತು ಎಲುಬುಗಳನ್ನು ಗಡಿಗೆಗೆ ತುಂಬಿ ಹೊಳಿ ಕಾಣಿಸುತ್ತಾರೆ ಅಥವಾ ಕೆಲವರು ತಮ್ಮ ಹೊಲಗಳಲ್ಲಿ ಅಥವಾ

ಮನೆಯ ಮುಂದೆ ಹುಗಿದು ಗದ್ದಿಗೆ ಕಟ್ಟಿಸಿ ಪೂಜೆ ಮಾಡುವ ಪದ್ಧತಿ ಇವರಲ್ಲಿ ಕಾಣಬಹುದು.

ಹೊರಿಹೊತ್ತ ಸೋದರಮಾವನನ್ನು ಮತ್ತು ಹಿರಿಯ ಮಗನನ್ನು ಕರೆದುಕೊಂಡು ಹೊಳೆಗೆ ಹೋಗಿ ಅಲ್ಲಿಗೆ ಬಂದಿರುವ ಕ್ಷೌರಿಕನಿಂದ ಹೊರಿಹೊತ್ತವನು ದಾಡಿ ಮಾತ್ರ ಮಾಡಿಸಿಕೊಳ್ಳುವನು. ಸತ್ತವನ ಹಿರಿಯ ಮಗನು ಮೀಸೆ ದಾಡಿ, ತಲೆ ಎಲ್ಲವನ್ನು ಬೋಳಿಸಬೇಕು. ತರುವಾಯ ಕ್ಷೌರಿಕನಿಗೆ ದಕ್ಷಿಣೆಯ ರೂಪದಲ್ಲಿ ಹಣ ನೀಡುವರು. ನಂತರ ಎಲ್ಲರೂ ಅಲ್ಲಿಯೇ ಸ್ನಾನ ಮಾಡಿ ತಮ್ಮ ಬಟ್ಟೆಗಳನ್ನು ತಾವೇ ತೊಳೆದುಕೊಂಡು ಬರುವರು.

ಇವರು ಬರುವವರೆಗೆ ರೂದ್ರಭೂಮಿಗೆ ಹೋದವರೆಲ್ಲರೂ ಮನೆಯ ಹೊರಗಡೆ ಕುಳಿತಿರುತ್ತಾರೆ. ಎರಡನೆಯ ದಿನ ಎಣ್ಣೆ ಮುಟ್ಟಿದ್ದರೆ ಇವತ್ತು ಹಿಟ್ಟಿನ ನೀರು ಮುಟ್ಟಬೇಕು. ಗೋಧಿ ಹಿಟ್ಟನ್ನು ಕಲಸಿ ಅದರ ಕಣಕದಿಂದ ಬಟ್ಟಲ ಆಕಾರ ಮಾಡಿ ಅದರಲ್ಲಿ ಹಿಟ್ಟಿನ ನೀರು ಹಾಕಿ ಹುಲ್ಲಿನಿಂದ ತಯಾರಿಸಿದ ಸಣ್ಣ ಕುಂಚವನ್ನು ಅದರಲ್ಲಿ ಹಿಟ್ಟಿನ ನೀರಿನಲ್ಲಿ ಅದ್ದಿ ಹೊರಗೆ ಸಿಂಪಡಿಸಬೇಕು. ಈ ರೀತಿ ಮೂರು ಸಲ ಮಾಡಿ ನಂತರ ಸೋದರ ಮಾವನು ಮುಟ್ಟಬೇಕು. ಆಮೇಲೆ ಸತ್ತವನ ಹಿರಿಮಗನು ಮುಟ್ಟಬೇಕು. ತರುವಾಯ ಅದನ್ನು ಎತ್ತಿಕೊಂಡು ಹಿಂದಕ್ಕೆ ಸರಿಯುತ್ತ ಹಿಂದೆ ನೋಡದೆ ಬೆನ್ನ ಹಿಂದಕ್ಕೆ ಎಸೆಯಬೇಕು.

ಇದಾದ ಮೇಲೆ ಸೋದರಮಾವನ ಮೇಲೆ ಹೊರಿಸಿದ ಹೊರಿ ಇಳಿಸಿಕೊಳ್ಳುವನು. ಅಂದರೆ ಸೋದರ ಮಾವನು ಮುಂದೆ ನಿಂತು ಅವನ ಹಿಂದೆ ಸತ್ತಾತನ ಮಗ ಕುಡಗೋಲ ಹಿಡಿದು ತಲೆಯಿಂದ ನೆಲಕ್ಕೆ ಮೂರು ಸಲ ಮುಟ್ಟಿಸಬೇಕು. ಹೀಗೆ ಮೂರು ಸಲ ಮಾಡಿದ ನಂತರ ಕೊನೆಯ ಸಾರಿ ಹೊರೆ ಇಳಿಸಿಕೊಂಡಿದ್ದೇನೆ ಎಂದು ಹೇಳಬೇಕು. ಅಂದು ಮಾಂಸ ಮತ್ತು ಜೋಳದ ನುಚ್ಚಿನ ಅಡುಗೆಯನ್ನು ಬಿಟ್ಟು ಬೇರೆ ಅಡಿಗೆ ಮಾಡುವಂತಿಲ್ಲ.

ಅಂದು ಮಾಡಿದ ಅಡಿಗೆ ಕಡಿಮೆ ಆಗಬೇಕೆ ವಿನಃ ಉಳಿಯಬಾರದೆಂಬ ನಂಬಿಕೆ ಇವರಲ್ಲಿದ್ದು ಸೋದರಮಾವ ಮತ್ತು ಸತ್ತವನ ಹಿರಿಯ ಮಗ ಇಬ್ಬರೂ ಸೇರಿ ಒಂದೇ ತಟ್ಟೆಯಲ್ಲಿ ಊಟ ಮಾಡಬೇಕು ಇದು ಆತ್ಮೀಯತೆಯ ಸಂಕೇತವೂ ಹೌದು.

ದಿನಕರ್ಮ ಪದ್ಧತಿ : ಕೊರವರಲ್ಲಿ ಶವಸಂಸ್ಕಾರದ ನಂತರ ಆಚರಿಸುವ ದಿನಕರ್ಮ ಎಂಬ ಮತ್ತೊಂದು ಪದ್ಧತಿಯನ್ನು ಕಾಣಬಹುದು. ಅಂದರೆ ಕರ್ಮ ಕಳೆದು ಸತ್ತವನನ್ನು ಹಿರಿಯರಲ್ಲಿ ಕೂಡಿಸಿಕೊಳ್ಳುವುದು ಎಂದರ್ಥ. ಈ ಕಾರ್ಯವನ್ನು ವ್ಯಕ್ತಿ ಸತ್ತ ೫, ೮, ಅಥವಾ ೧೧ ದಿನಗಳಲ್ಲಿ ಹೀಗೆ ಅವರವರ ಅನುಕೂಲಕ್ಕೆ ತಕ್ಕಂತೆ ಒಂದು ದಿನ ನಿರ್ಧರಿಸಿ ದಿನಕಾರ್ಯ ಮಾಡುತ್ತಾರೆ. ಆ ದಿನಕ್ಕೆ ಮನೆಯನ್ನು ಸ್ವಚ್ಛ ಗೊಳಿಸಲಾಗುತ್ತದೆ. ಹಾಸಿಗೆ ಬಟ್ಟೆಗಳನ್ನು ಶುಭ್ರಗೊಳಿಸಲಾಗುತ್ತದೆ. ಅಂದು ಮಧ್ಯಾಹ್ನವೇ ದಿನಕರ್ಮದ ಕಾರ್ಯ ಆರಂಭಿಸುತ್ತಾರೆ. ಪೂರ್ವಾಭಿಮುಖವಾಗಿ ಕುಂಭ ತಯಾರಿ ಮಾಡುವರು. ಮೊದಲು ಆ ಸ್ಥಳವನ್ನು ಮಡಿ ಮಾಡಿ ಸತ್ತವನ ಬಟ್ಟೆ ಹಾಸಿಗೆ ಹೊದಿಕೆಗಳನ್ನು

ಅಂದವಾಗಿ ಮಡಿಚಿ ಇಡುವರು. ಸತ್ತವರು ಸ್ತ್ರೀ ಇದ್ದರೆ ಸೀರೆಯನ್ನು, ಪುರುಷನಿದ್ದರೆ ಒಂದು ಮೀಟರ ಬಿಳಿ ಬಟ್ಟೆಯನ್ನು ತಂದು ಅದರ ಮೇಲೆ ಇಟ್ಟು ಅಡಿಕೆಬೆಟ್ಟದಿಂದ ಮನುಷ್ಯನ ಆಕೃತಿ ಮಾಡುತ್ತಾರೆ. ಇದರ ಮುಂಭಾಗದಲ್ಲಿ ಔಡಲ ಎಲೆ ಹಾಕಿ ಕುಂಭ ಮಾಡುತ್ತಾರೆ. ಹೋಳಿಗೆಗಳನ್ನು ಈ ಕುಂಭದ ಸುತ್ತಲೂ ಇಡುವರು. ನಂತರ ಸತ್ತ ವ್ಯಕ್ತಿ ಉಪಯೋಗಿಸುತ್ತಿದ್ದ ಎಲ್ಲ ಪದಾರ್ಥಗಳನ್ನು ಅಂದರೆ ತಿಂಡಿತಿನಿಸುಗಳು, ಎಲೆ ಅಡಿಕೆ, ಹಣ್ಣುಹಂಪಲು, ಬೀಡಿ, ಸಿಗರೇಟು, ಸಾರಾಯಿ ಮುಂತಾದವನ್ನು ಸಂಬಂಧಿಕರು ತಂದಂಥ ಹಣ್ಣುಗಳನ್ನು ಇಡುತ್ತಾರೆ. ಕುಂಭದ ಎಡಬಲ ಬದಿಗೆ ಗೋದಿ ಕಣಕದಿಂದ ತಯಾರಿಸಿ ಎಣ್ಣೆಯಲ್ಲಿ ಕರಿದ ಪಣತಿಗಳನ್ನು ಇಟ್ಟು ದೀಪ ಹಚ್ಚುವರು. ಮತ್ತು ತಳದಲ್ಲಿ ಸ್ವಲ್ಪ ಅಕ್ಕಿ ಹಾಕಿ ಮೇಲೆ ನೀರು ತುಂಬಿದ ತಂಬಿಗೆ ಇಡುವರು. ಇನ್ನೂ ಸ್ವಲ್ಪ ದೂರದಲ್ಲಿ ಬೆಂಕಿ ಹಾಕಿ ಎಲ್ಲರೂ ಲೋಬಾನ ಹಾಕುವರು. ಈ ವೇಳೆಯಲ್ಲಿ ಅನ್ಯ ಸಮುದಾಯದ ಜನ ಬಂದು ಲೋಬಾನ ಹಾಕಬಹುದು.

ನಂತರ ಪ್ರಾಣಿ ಬಲಿಯ ಕಾರ್ಯ ಮಾಡುತ್ತಾರೆ. ಹಿಂದಿನ ದಿನಗಳಲ್ಲಿ ಇಡೀ ಪ್ರಾಣಿಯನ್ನೇ ಕಾಲು ಮೇಲಕ್ಕೆ ಮಾಡಿ ಕುಂಭಕ್ಕೆ ಎದುರಾಗಿ ಹುಗಿಯುತ್ತಿದ್ದರಂತೆ. ಅದು ಪ್ರಾಣ ಬಿಟ್ಟಿತೆಂದು ಗೊತಾದ್ತ ಮೇಲೆ ಹೊರಗೆ ತೆಗೆಯುತ್ತಿದ್ದರು. ಈ ಪದ್ಧತಿ ಈಗ ಎಲ್ಲಿಯೂ ಕಾಣುವುದಿಲ್ಲ. ಈಗ ಒಬ್ಬ ಪಿಂಜಾರರನ್ನು ಕರೆದು ಕುಂಭದ ಎದುರುಗಡೆ ಚೂರಿ ಹಾಕಿಸುವರು. ತರುವಾಯ ಆ ಪ್ರಾಣಿಯ ತಲೆಯನ್ನು ದೇಹದಿಂದ ಬೇರ್ಪಡಿಸಿ ಅದರ ಬಾಯಿಯಲ್ಲಿ ಅದರ ಬಲಗಾಲನ್ನು ಇರಿಸಿ ಕುಂಭದ ಎದುರಿಗೆ ಇಡುತ್ತಾರೆ. ಆ ಪ್ರಾಣಿಯ ರಕ್ತವನ್ನು ಚೂರಿ ಹಾಕಿದ ಜಾಗದಲ್ಲಿನ ಕುಣಿಯಲ್ಲಿ ಹಾಕಿ ಮುಚ್ಚಿದಾಗ ಪ್ರಾಣಿ ಬಲಿ ಕಾರ್ಯವು ಸಾರ್ಥಕವಾಗುತ್ತದೆ ಎಂದು ನಂಬುತ್ತಾರೆ.

ನಂತರ ಮಾಂಸದ ಅಡುಗೆಯನ್ನು ಮಾಡುತ್ತಾರೆ. ಈ ಪ್ರಾಣಿಯ ಹೊಟ್ಟೆಯೊಳಗಿನ ಕೆಲವು ಭಾಗಗಳನ್ನು ತೆಗೆದುಕೊಂಡು ಸುಡುತ್ತಾರೆ. ಆ ಸುಟ್ಟ ಮಾಂಸವನ್ನು ಕುಂಭಕ್ಕೆ ಹಾಕುವರು. ಮಾಂಸದ ಸಾರು ಮಾಡುತ್ತಾರೆ ವಿನಃ ಈ ಸಾರಿನಲ್ಲಿ ಇದ್ದ ಮಾಂಸವನ್ನು ಮಾತ್ರ ಪೂಜೆಗೆ ಇಡುವುದಿಲ್ಲ. ಅದು ಎಂಜಲಾಗಿರುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಮಾಂಸವನ್ನು ಕುಂಭಕ್ಕೆ ಹಾಕಿ ಮತ್ತೆ ಎಲ್ಲರೂ ಲೋಬಾನ ಹಾಕಿದ ನಂತರ ಎಲ್ಲರೂ ಬೇರೆ ಎಡೆ ಮಾಡಿಕೊಂಡು ಒಂದು ತಂಬಿಗೆ ನೀರು, ಗಂಗಾಳ (ಕಂಚಿನ ದೊಡ್ಡ ತಟ್ಟೆ) ತೆಗೆದುಕೊಂಡು ಮನೆಯ ಹಿಂಬದಿಗೆ ಬರುತ್ತಾರೆ. ಈಗ ಕುಂಭದ ಹತ್ತಿರ ಒಬ್ಬನನ್ನು ಮಾತ್ರ ಕುಳ್ಳಿರಿಸಿರುತ್ತಾರೆ. ಉಳಿದವರು ಒಂದು ಮಗುವನ್ನೂ ಸಹ ಬಿಡದಂತೆ ಎಲ್ಲರೂ ಒಟ್ಟುಗೂಡಿ ಮನೆ ಹಿಂದೆ ಹೋಗುವರು. ಆಗ ತಂಬಿಗೆಯಲ್ಲಿಯ ನೀರನ್ನು ಸಿಂಪಡಿಸಿ ತಾವು ತಂದ ಎಡೆಯನ್ನು ಇಡುವರು. ಇದಾದ ಮೇಲೆ ಒಬ್ಬನು ಹಿಂದಿನಿಂದ ಬಳಗದಲ್ಲಿ ಕೂಡಿಕೊಂಡಿ ಏನಪ್ಪ ಎಂದು ಕೇಳುವನು. ಒಳಗಿನವನು ಕೂಡಿಕೊಂಡಿದ್ದೇನೆ ಎಂದು ಉತ್ತರಿಸಿ ಗಂಗಾಳ ಬಾರಿಸುವನು. ಉಳಿದವರು ಚಪ್ಪಾಳೆ ತಟ್ಟುವರು. ನಂತರ ಆ ದಿನ ಮಾಡಿದ ಮಾಂಸದೂಟವನ್ನು ಎಲ್ಲರೂ ಉಣ್ಣುತ್ತಾರೆ.

**ಮುಖ ಮಾಡಿಸುವ ಪದ್ಧತಿ:** ಈ ಸಮುದಾಯದಲ್ಲಿ ಅತ್ಯಂತ ಪ್ರಮುಖವಾದದ್ದು

ಮುಖಿ ಮಾಡಿಸುವ ಪದ್ಧತಿ. ವ್ಯಕ್ತಿ ಸತ್ತ ಹದಿನೈದು ಅಥವಾ ತಿಂಗಳೊಳಗಾಗಿ ಇದನ್ನು ಇಟ್ಟುಕೊಳ್ಳಬೇಕು. ಏಕೆಂದರೆ ಈ ಪದ್ಧತಿ ಮಾಡದೇ ಆ ಮನೆಯಲ್ಲಿ ಯಾವುದೇ ಪೂಜೆ, ಶುಭಕಾರ್ಯಗಳಾದ ಮದುವೆ, ಮುಂತಾದ ಮಂಗಲ ಕಾರ್ಯ ನಡೆಸುವಂತಿಲ್ಲ, ಆದರೆ ಮನೆಯಲ್ಲಿ ಒಂದು ತುಂಬಿದ ಚರಿಗೆಯನ್ನು ಸತ್ತವನ ಹೆಸರಿನಲ್ಲಿ ಇಟ್ಟು ಪೂಜಿಸಬಹುದು.

ಆ ಊರಿನ ಅಕ್ಕಸಾಲಿಗನ ಮನೆಗೆ ಹೋಗಿ ಬೆಳ್ಳಿಯ ತಗಡಿನಲ್ಲಿ ಸ್ತ್ರೀ ಇದ್ದರೆ ಸ್ತ್ರೀ ದೇವತೆಯ ಚಿತ್ರ, ಪುರುಷನಿದ್ದರೆ ಹನುಮಂತ ದೇವರ ಚಿತ್ರವನ್ನು ಅಚ್ಚು ಹಾಕಿಸಿ ಮುಖಿ ಮಾಡಿಸುತ್ತಾರೆ. ಈ ಸಮುದಾಯದ ಮನೆದೇವರು ಹನುಮಂತನಾಗಿರುವುದರಿಂದ ಈ ದೇವರ ಚಿತ್ರವನ್ನೇ ಅಚ್ಚುಹಾಕಿಸುತ್ತಾರೆ. ಈ ಹಿಂದೆ ಇವರ ಪೂರ್ವಜರು ತೀರಿಕೊಂಡಾಗ ಮಾಡಿಸಿರುವ ಮುಖಿಗಳನ್ನು ಹೊರ ತೆಗೆಯುತ್ತಾರೆ. ಆ ದಿನ ಪೂಜೆಗೆ ಅಕ್ಕಿ ಅಥವಾ ಜೋಳದಿಂದ ನಿಧಿ ಹಾಕುತ್ತಾರೆ. ಆ ನಿಧಿಯ ಮೇಲೆ ಸಾಲಾಗಿ ಹಿಂದಿನ ಹಿರಿಯರ ಮುಖಿಗಳನ್ನು ಇಡಲಾಗುತ್ತದೆ. ಮಧ್ಯದಲ್ಲಿ ಈಗ ಮಾಡಿಸಿದ ಮುಖಿ ಇಡುತ್ತಾರೆ. ಅದಕ್ಕೆ ವಿಭೂತಿ, ಕುಂಕುಮ ಹಚ್ಚಿ ಪೂಜೆ ಮಾಡುವರು. ಅಂದು ಮಾಡಿರುವ ಸಿಹಿ ಅಡುಗೆಯನ್ನು ಎಡೆ ಮಾಡುವರು. ನಂತರ ಎಲ್ಲರೂ ಸತ್ತ ವ್ಯಕ್ತಿ ತಮ್ಮ ಹಿರಿಯರ ಬಳಗದೊಂದಿಗೆ ಕೂಡಿದನು ಎಂದು ನಂಬುತ್ತಾರೆ. ಅಂದು ಕೂಡಿದವರೆಲ್ಲರಿಗೂ ಸಿಹಿ ಊಟವನ್ನು ಮಾಡಿಸಲಾಗುತ್ತದೆ.

### ಧಾರ್ಮಿಕ ವಿಧಿವಿಧಾನಗಳು, ದೇವರು

ಕೊರವರು ಮೊದಲಿನಿಂದಲೂ ಹಿಂದೂ ಸಂಪ್ರದಾಯಕ್ಕೆ ಅಂಟಿಕೊಂಡಿದ್ದರೂ ತಾವು ಆಚರಿಸುವ ವಾರ್ಷಿಕ ಆಚರಣೆಗಳು, ಹಬ್ಬ ಹರಿದಿನಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಈ ಸಮುದಾಯವು ಧಾರ್ಮಿಕ ಆಚರಣೆಗಳ ಬಗ್ಗೆ ಪೂಜೆ, ಬಲಿ, ನಂಬಿಕೆ ಮುಂತಾದವುಗಳನ್ನು ಬಹಳ ಶ್ರದ್ಧೆಯಿಂದ ಆಚರಿಸುತ್ತಾರೆ. ತಮ್ಮ ಮೂಲ ಸಂಪ್ರದಾಯವನ್ನು ತಪ್ಪದೆ ಆಚರಿಸುವವರಾಗಿದ್ದಾರೆ.

ಸಾಮಾನ್ಯವಾಗಿ ತಮ್ಮ ಮನೆದೇವರು, ಕುಲದೇವರು, ಊರುದೇವರು, ಪಿತೃ ದೇವರು, ನಾಡದೇವತ, ಕಾಡುದೇವತೆ, ಹೀಗೆ ಇವರಿಗೆ ಹೆಚ್ಚೆಗೊಂದು ದೇವರು ದಿಂಡಿರುಗಳು ಬೇಕೆ ಬೇಕು. ಒಂದೊಂದು ಕಾಯಿಲೆಗಳಿಗೆ, ರೋಗಕ್ಕೆ, ಕಾಟಕ್ಕೆ, ಸುಖಿ ಸಮೃದ್ಧಿಗೆ ದೇವರು ಸೃಷ್ಟಿಸಿಕೊಂಡಿದ್ದಾರೆ.

ಕೊರವ ಸಮುದಾಯದಲ್ಲಿಯೂ ಸಹ ಕುಲದೇವರು ಇದ್ದು ಅದಕ್ಕೊಬ್ಬ ಪೂಜಾರಿಯೂ ಇರುತ್ತಾನೆ. ಎಲ್ಲರಂತೆಯೇ ಇವರೂ ಸಹ ಸ್ವರ್ಗ, ನರಕ, ಪಾಪ ಪುಣ್ಯಗಳಲ್ಲಿ ಬಲವಾದ ನಂಬಿಕೆಯುಳ್ಳವರಾಗಿದ್ದಾರೆ. ಕೊರಮರಲ್ಲಿ ಮಾರುತಿ, ಸುಬ್ರಹ್ಮಣ್ಯ, ಭವಾನಿ, ವಿಷ್ಣು, ತಿಮ್ಮಪ್ಪ, ಮಹಾಸತಿ ಯರಕಮ್ಮ, ಮೂದೇವಿ, ಕೊಲ್ಹಾಪುರಿಯಮ್ಮ, ಪೆರುಮಾಳಸ್ವಾಮಿ, ಮುನಿಸ್ವಾಮಿ, ಮಾರೆವ್ವ, ಕೊಲ್ಲಾರೆಪ್ಪ, ಹುಲಿಗೆವ್ವ ಮತ್ತು ಸಂಕಲಮ್ಮ ಇನ್ನೂ ಮುಂತಾದ ದೇವರನ್ನು ಪೂಜಿಸುತ್ತಾರೆ.

ಇವರಲ್ಲಿ ಮುಂಬೈ ಪ್ರಾಂತ್ಯದ ಕೊಲ್ಲಾಪುರದ ದೇವತೆಯೇ ಕೊಲ್ಹಾಪುರಿಯಮ್ಮ ಆಗಿದ್ದಾಳೆ. ಹಾಗೆಯೇ ತಿರುಪತಿಯ ವೆಂಕಟೇಶ್ವರ ಸ್ವಾಮಿಯೇ ಪೇರುಮಾಳಸ್ವಾಮಿಯಾಗಿದ್ದಾರೆ. ಕೆಲವು ಸಮಯ ಹೂವಿನಿಂದ ಅಲಂಕೃತವಾದ ವೈಷ್ಣವ ನಾಮವಿರುವ ಹಿತ್ತಾಳೆ ಕಳಸದ ರೂಪದಲ್ಲಿ ವೆಂಕಟೇಶ್ವರನನ್ನು ಪೂಜಿಸುತ್ತಾರೆ.

**ಪೋಲೇರಮ್ಮ:** ಪೋಲೇರಮ್ಮನ ಪೂಜೆಯನ್ನು ತಾವು ವಾಸಿಸುವ ಗುಡಿಸಿಲಿನ ಸಮೀಪದಲ್ಲಿ ಪೂಜಿಸಬಹುದೇ ಹೊರತು ಗುಡಿಸಲಿನ ಒಳಗಡೆ ಪೂಜಿಸುವ ಹಾಗಿಲ್ಲ. ಜೇಡಿಮಣ್ಣಿನ ಮುದ್ದೆಯಿಂದ ಕೋನಾಕಾರವನ್ನು ಮಾಡಿ ಅದಕ್ಕೆ ಬೇವಿನ ಸೊಪ್ಪನು ಸಿಕ್ಕಿಸಿ, ಅದರ ಮುಂದೆ ಮೂರು ಕಲ್ಲುಗಳನ್ನಿಟ್ಟು ಅವಳಿಗೆ ಉಪವಾಸವಿದ್ದ ಮಹಿಳೆಯರು ತಾವು ತಯಾರಿಸಿದ ಪೊಂಗಲನ್ನು ಅರ್ಪಿಸುತ್ತಾರೆ. ಈ ಪೋಲೇರಮ್ಮನನ್ನು ಪೂಜಿಸಲು ತಯಾರಿಸುವ ಪೊಂಗಲ್ ಪಾತ್ರೆಯಲ್ಲಿ ಕುದಿಯುವ ರೀತಿಯನ್ನು ಗಮನಿಸಿ ತಮಗೆ ಒಳ್ಳೆಯದಾಗುತ್ತದೋ ಅಥವಾ ಕೆಟ್ಟದಾಗುತ್ತದೋ ಎಂಬುದನ್ನು ತಿಳಿಯುತ್ತಾರೆ.

**ಮಾರಮ್ಮ:** ಜೇಡಿಮಣ್ಣಿನಿಂದ ಚೂಪಾದ ಚಿಕ್ಕ ಗೋಪುರದಾಕಾರವನ್ನು ಮಾಡಿ ಅದನ್ನು ಮಾರಿಯಮ್ಮ ಎಂದು ಪೂಜಿಸುವರು. ಹೆಂಗಸರು ದೇವರಿಗೆ ತೂಗು ಹಾಕಿದ ಪುಟ್ಟದಾದ ಚಿನ್ನ ಮತ್ತು ಬೆಳ್ಳಿ ಒಡವೆಗಳನ್ನು ತಮ್ಮ ಕೊರಳಿಗೆ ಹಾಕಿಕೊಳ್ಳುವರು. ಮಾರಿಯಮ್ಮ ದೇವತೆಯನ್ನು ನಿರ್ಮಿಸಿದ ಅಕ್ಕಸಾಲಿಗನೇ ಆ ಒಡವೆಯನ್ನು ಅವರಿಗೆ ನೀಡಿರುತ್ತಾನೆ.

**ಸತವು ದೇವತೆ :** ಈ ದೇವತೆಯು ಕೊರವರ ಗೃಹದೇವತೆ ಎಂದು ತಿಳಿಯುತ್ತದೆ. ದಕ್ಷಿಣ ಜಿಲ್ಲೆಗಳಲ್ಲಿ ಮೂರು ಅಥವಾ ನಾಲ್ಕು ವರ್ಷಗಳಿಗೊಮ್ಮೆ ಈ ದೇವತೆಯ ಪೂಜೆಯನ್ನು ಬಹಳ ಭಕ್ತಿಯಿಂದ ವೈಭವೋಪೇತವಾಗಿ ಮಾಡುತ್ತಾರೆ. ಹಳ್ಳಿಯ ಪಶ್ಚಿಮ ದಿಕ್ಕಿನಲ್ಲಿ ಸಭೆ ಸೇರಿ ಮಣ್ಣಿನ ಮಂಟಪವೊಂದನ್ನು ನಿರ್ಮಿಸಿ ಮಂಟಪದ ಮುಂದೆ ಕುರಿಯನ್ನು ಬಲಿ ನೀಡಿ ಹಬ್ಬವನ್ನು ಆಚರಿಸುತ್ತಾರೆ.

**ಮೂದೇವಿ :** ನಿದ್ರಾದೇವತೆಯಾದ ಈ ದೇವಿಯನ್ನು ದರೋಡೆ, ಕಳ್ಳತನ ಮಾಡುವ ಕೊರಮರು ಹೆಚ್ಚಾಗಿ ಪೂಜಿಸುತ್ತಾರೆ. ತಾವು ಮಾಡುವ ಕೃತ್ಯದಲ್ಲಿ ಯಾವ ಅಡಚಣೆಯಾಗಬಾರದೆಂದು ಈ ದೇವರನ್ನು ಆರಾಧಿಸುವರು. ತಮ್ಮ ಕೃತ್ಯಗಳಲ್ಲಿ ಯಶಸ್ಸಾದರೆ ಈ ದೇವಿಗೆ ಬಲಿ ನೀಡಿ ಹಬ್ಬ ಮಾಡುವರು.ದೇವತೆಯ ಗೌರವಾರ್ಥವಾಗಿ ಸಾರಾಯಿಯನ್ನು ಹಂಚಿಕೊಂಡು ಕುಡಿಯುವರು.

ದಕ್ಷಿಣ ಕರ್ನಾಟಕದಲ್ಲಿ ಸಾಮಾನ್ಯವಾಗಿ ಪಿರಿಯಾಪಟ್ಟದಮ್ಮ, ಕೊಲ್ಲಾಪುರದಮ್ಮ, ಜಿಂಕದಮ್ಮ, ಮಸ್ಕೆ ಹನುಮಂತರಾಯ, ಹೊಲೆಮಸಣಿ, ಹಟ್ಟಿ ಲಕ್ಕಮ್ಮ, ಅಂತ್ರಗಟ್ಟಮ್ಮ, ಮೆಳೆಯಮ್ಮ, ತೆಲಗಿ ಹನುಮಂತರಾಯ, ತಿರುಪತಿವೆಂಕಟರಮಣಸ್ವಾಮಿ ಮುಂತಾದ ದೇವರುಗಳನ್ನು ಮನೆ ದೇವರಾಗಿ ಪೂಜಿಸುತ್ತಾರೆ. ಇವರಲ್ಲಿ ಶನಿದೇವರ ಬಗ್ಗೆ ಅತಿಯಾದ ಭಯಭಕ್ತಿಯನ್ನು ಹೊಂದಿದ್ದಾರೆ. ತಿರುಪತಿ ವೆಂಕಟೇಶ್ವರ, ಧರ್ಮಸ್ಥಳ ಮಂಜುನಾಥ ನಿಗೂ ಹರಕೆ ಕಟ್ಟಿಕೊಳ್ಳುತ್ತಾರೆ.

## ಸಾಂಸ್ಕೃತಿಕ ವೀರ ನುಲಿಯ ಚಂದಯ್ಯ

ನುಲಿಯ ಚಂದಯ್ಯನವರೇ ಕುಳುವ ಸಮುದಾಯದ ಗುರುಗಳು ಎಂಬ ಮಾತು ಇತ್ತೀಚಿನ ದಿನಗಳಲ್ಲಿ ಕೇಳಿ ಬರುತ್ತಿದ್ದು, ನುಲಿಯ ಚಂದಯ್ಯನವರು ಹನ್ನೆರಡನೇ ಶತಮಾನದ ಕಾಯಕ ಜೀವಿಗಳಲ್ಲಿ ಒಬ್ಬರಾಗಿರುವುದುನ್ನು ಮತ್ತು ಅವರ ಬಗೆಗೆ ದೊರೆಯುವ ಮಾಹಿತಿಯನ್ನು, ಈ ಕಾರಣಕ್ಕಾಗಿ ನಾವು ಪರಿಶೀಲಿಸಬೇಕಾಗುತ್ತದೆ.

ಕಾರಣ ನುಲಿಯ ಚಂದಯ್ಯನವರು ಬಸವೇಶ್ವರ ಸಮಕಾಲೀನ ವಚನಕಾರರು ಇವರ ವಚನಾಂಕಿತ ಚಂದೇಶ್ವರ ಲಿಂಗ ಇವರು ವಿಜಾಪುರ ಜಿಲ್ಲೆಯ ಶಿವಣಗಿ ಗ್ರಾಮದಲ್ಲಿ ಹುಟ್ಟಿ ಹಗ್ಗ ಹೊಸೆಯುವ ವೃತ್ತಿಯಿಂದ ಜೀವನ ನಡೆಸುತ್ತಿದ್ದು ಕಲ್ಯಾಣದಲ್ಲಿ ಬಸವೇಶ್ವರರ ಕ್ರಾಂತಿಯ ವಿಚಾರಕ್ಕೆ ಒಗೊಟ್ಟು ಕಲ್ಯಾಣಕ್ಕೆ ಆಗಮಿಸಿ ಬಸವಧರ್ಮ ದೀಕ್ಷೆ ಪಡೆದು ನಿತ್ಯಕಾಯಕ ದಾಸೋಹದಲ್ಲಿ ಅತ್ಯಂತ ನಿಷ್ಠರಾಗಿದ್ದವರು. ಅವರ ಪ್ರತಿನಿತ್ಯದ ಕಾಯಕವೆಂದರೆ ಅಡವಿಗೆ ಹೋಗಿ ನೀರಿನಲ್ಲಿ ಬೆಳೆಯುವ ಹೊಡಕೆಯ ಹುಲ್ಲನ್ನು ಕೊಯ್ದು ತಂದು ಹಗ್ಗ ಕಣ್ಣಿಗಳನ್ನು ಮಾಡುವ ಕಾಯಕವನ್ನು ಮಾಡುತ್ತಿದ್ದರು.

೧೨ನೇ ಶತಮಾನದಲ್ಲಿ ಶರಣಸಮೂಹದಲ್ಲಿ ಮಹಾತ್ಮರಾಗಿ ಮೂಡಿಬಂದವರು ನುಲಿಯ ಚಂದಯ್ಯನವರು ಅಂದಿನ ಶರಣರು ಒಂದೊಂದು ಕಾಯಕವನ್ನು ನಿರ್ವಹಿಸುತ್ತಿದ್ದರು. ಹೆಸರಿನೊಂದಿಗೆ ಅವರ ಕಾಯಕ ಸೇರಿರುವುದು ಒಂದು ವಿಶೇಷ.

ಶರಣರ ಒಲವು ನಿಲುವುಗಳನ್ನು ಮೈಗೂಡಿಸಿಕೊಂಡಿದ್ದ ನುಲಿಯ ಚಂದಯ್ಯನವರು ನಿತ್ಯವೂ ಲಿಂಗ ಪೂಜೆಯನ್ನು ಪೂರೈಸಿಕೊಂಡು ಹಳ್ಳಕ್ಕೆ ಹುಲ್ಲು ತಂದು ಹುಲ್ಲಿನಿಂದ ನುಲಿ, ಕಣ್ಣಿ, ಹಗ್ಗ ಹೊಸೆಯುವುದು, ಹೊಸದವುಗಳನ್ನು ಮಾರಿಕೊಂಡು ಬರುವುದು. ಮಾರಿಬಂದ ಹಣದಿಂದ ದಾಸೋಹ ನಡೆಸುವುದು ಅವರ ಕಾಯಕದ ಶ್ರೇಷ್ಠ ಹಂತವಾಗಿದೆ.

ನುಲಿಯ ಚಂದಯ್ಯನವರು ಕುಳುವ ಸಮುದಾಯಕ್ಕೆ ಸೇರಿದವರು ಎಂಬುದ ಕುರಿತು ಸ್ಪಷ್ಟವಾದ ನಿಕರವಾದ ಮಾಹಿತಿ ಲಭ್ಯವಾಗಿಲ್ಲ. ಆದರೆ ಕ್ಷೇತ್ರಕಾರ್ಯ ಕೈಗೊಂಡಂತಹ ಸಂದರ್ಭದಲ್ಲಿ ಕರ್ನಾಟಕದ ಎಲ್ಲಾ ಭಾಗಗಳಲ್ಲಿ ನುಲಿ ಚಂದಯ್ಯನವರು ಕುಳುವ ಸಮುದಾಯದವರು ಎಂದು ಕುಳುವರು ನಂಬಿರುತ್ತಾರೆ. ಆದರೆ ಇವರಂತೆ ಬೀದರ ಜಿಲ್ಲೆಯಲ್ಲಿ ಮಾದಿಗ ಸಮುದಾಯವು ಕೂಡ ನುಲಿ ಚಂದಯ್ಯ ತಮ್ಮ ಸಮುದಾಯವೆಂದು ಹೇಳಿಕೊಳ್ಳುತ್ತಿರುವುದು ತಿಳಿದು ಬಂದಿದೆ.

ದಿನಾಂಕ ೦೧.೦೩.೧೯೯೮ರಂದು ದಾವಣಗೆರೆಯಲ್ಲಿ ನಡೆದ ಅಧಿವೇಷನದಲ್ಲಿ ನುಲಿ ಚಂದಯ್ಯನವರನ್ನು ಕುರಿತಾದ ಕಿರು ಪುಸ್ತಕ ಹಾಗೂ ಅವರ ಭಾವಚಿತ್ರಗಳನ್ನು ಸಮ್ಮೇಳನದಲ್ಲಿ ಬಿಡುಗಡೆ ಮಾಡಲಾಗಿದೆ. ನುಲಿಯ ಚಂದಯ್ಯನವರಿಗೂ ಕುಳುವ ಸಮುದಾಯದವರಿಗೂ ಇತ್ತೀಚಿಗೆ ಸಂಬಂಧ ಕಲ್ಪಿಲಿರಬಹುದೆಂದು ಅನಿಸುತ್ತದೆ.

ದಿನಾಂಕ ೦೫.೦೬.೨೦೦೦ರಂದು ಚಿತ್ರದಲ್ಲಿ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮಿಗಳ ನೇತೃತ್ವದಲ್ಲಿ ನುಲಿಯ ಚಂದಯ್ಯನವರ ಮಠದ  ಸ್ಥಾಪನೆ ಆಗಿದೆ. ಈ ಮಠಕ್ಕೆ ಕೊರಮ ಸಮುದಾಯದ ಯುವಕರೊಬ್ಬರಿಗೆ ಲಿಂಗದೀಕ್ಷೆ ಮಾಡಿ ಸ್ವಾಮೀಜಿಯ ಪಟ್ಟಕಟ್ಟಿ, ನುಲಿಯ ಚಂದಯ್ಯಸ್ವಾಮಿಗಳೆಂದು ನಾಮಕರಣ ಮಾಡಿರುವುದು ತಮಗೆ ಗುರು ಮಠವಿಲ್ಲ ಎಂಬ ಕೊರಗು ಇಂದು ಇಲ್ಲ.

ಹೀಗಾಗಿ ಈಗ ಕೊರಮರಿಗೆ ಚಿತ್ರದುರ್ಗವು ಧಾರ್ಮಿಕ ಕೇಂದ್ರವಾಗಿದ್ದು, ಈ ಜನಗಳ ಸಂಘಟನೆಯನ್ನು ಧಾರ್ಮಿಕ ಚೌಕಟ್ಟಿನಲ್ಲಿ ನಡೆಸುವ ಪ್ರಯತ್ನ ಇದಾಗಿದೆ.

**ಹಬ್ಬಗಳು**

ಕೊರಮರು ಆಯಾ ಸ್ಥಳೀಯ ಪದ್ಧತಿಗಳಿಗನುಗುಣವಾಗಿ ಶ್ರದ್ಧೆ, ಭಕ್ತಿಗಳಿಂದ ದೇವರನ್ನು ಪೂಜಿಸುತ್ತಾರೆ. ಇವರು ಯುಗಾದಿ, ಗೌರಿಹಬ್ಬ, ನವರಾತ್ರಿ ದೀಪಾವಳಿ ಹಬ್ಬಗಳನ್ನು ಆಚರಿಸುವರು.

**ಯುಗಾದಿ:** ಈ ಹಬ್ಬದಲ್ಲಿ ಕೊರಮರು ಹೆಚ್ಚಾಗಿ ಸಿಹಿ ಅಡುಗೆ ಮಾಡುವ ಪದ್ಧತಿ ಇದೆ. ಹಬ್ಬಕ್ಕಾಗಿ ಮನೆಯನ್ನು ಸ್ವಚ್ಛ ಮಾಡಿ ಸಾರಿಸಿ, ಅಲಂಕರಿಸಿ ಹಬ್ಬವನ್ನು ಆಚರಿಸುತ್ತಾರೆ.

ಯುಗಾದಿಯ ಹಬ್ಬದ ದಿವಸ ಮನೆಯ ಹಿರಿಯರಿಗೆ ಹೊಸಬಟ್ಟೆಯನ್ನು ಎರಿಸುತ್ತಾರೆ. ಯುಗಾದಿ ಹಬ್ಬದ ಕರಿಯ ದಿವಸ ಬೇಟೆಯಾಡುವುದಕ್ಕೆ ಹೋಗುತ್ತಾರೆ. ಬೇಟೆಯಾಡುವುದಕ್ಕೆ ಬಲೆಯನ್ನು ತೆಗೆದುಕೊಂಡು ಹೋಗಿ ಮೊಲ, ಅಳಿಲು, ಬಿಳಿ ಇಲಿ, ಉಡ, ಮುಂಗುಸಿ, ಮುಳ್ಳುಹಂದಿ ಹದಗ, ಕತ್ತೆಕಿರುಬ, ನರಿಯನ್ನು ಬೇಟೆಯಾಡಿ ಅವನ್ನು ಆಹಾರವಾಗಿ ಸ್ವೀಕರಿಸುವರು.

**ಕಾರಹುಣ್ಣಿಮೆ:** ಕಾರ ಹುಣ್ಣಿಮೆ ದಿನ ಹೋಳಿಗೆ ಹುಗ್ಗಿಯನ್ನು ಮಾಡುವರು ತಮ್ಮ ಕುಲಕಸಬಿನ ಸಾಮಾನುಗಳಾದ ಕುಡುಗೋಲು, ಡೋಲು, ತಾಸೆ, ಗೆಜ್ಜೆ, ಸನಾಯಿ, ಸೆಂಡಂಡೋಲು, ಹಾರೆ, ಬೀಸುವಕಲ್ಲು ಮುಂತಾದ ಸಾಮನುಗಳಿಗೆ ಪೂಜೆಯನ್ನು ಮಾಡಿ ತೆಂಗಿನಕಾಯಿ ಒಡೆಯಲಾಗುತ್ತದೆ.

**ಹೋಳಿ ಹುಣ್ಣಿಮೆ:** ಕೊರಮ ಸಮುದಾಯದಲ್ಲಿ ಹೋಳಿ ಹುಣ್ಣಿಮೆಯ ದಿವಸ ಎಲ್ಲರು ಸಂತೋಷದಿಂದ ಹಬ್ಬಾಚರಣೆ ಮಾಡಲಾಗುತ್ತದೆ. ಅಂದು ಮನೆಯಲ್ಲಿ ಹೋಳಿಗೆ ಮಾಡಿ ಮಾತಂಗಿಯರನ್ನು ಕರೆದು ಬೇವಿನ ಸೊಪ್ಪು ತಂದು ಯಲ್ಲಮ್ಮನಿಗೆ ಅಡಲಿಗೆ ತುಂಬುವರು. ಮತ್ತು ಮಾತಂಗಿಗೆ ದಕ್ಷಿಣೆಯನ್ನು ನೀಡಿ ಕಳುಹಿಸುತ್ತಾರೆ. ಅಂದು ಸಂಜೆ ಕತ್ತೆಯ ಮೇಲೆ ಕುಳಿತುಕೊಂಡು ಸವಾರಿ ಮಾಡುತ್ತಾರೆ.

**ದೀಪಾವಳಿ:** ಈ ಹಬ್ಬವು ಕೊರಮ ಸಮುದಾಯಕ್ಕೆ ಬಹಳ ಶ್ರೇಷ್ಠವಾದ ಹಬ್ಬವಾಗಿದೆ. ಈ ಹಬ್ಬದಲ್ಲಿ ಅವರ ಪಿತೃಗಳಿಗೆ ಎಡೆಯನ್ನು ಅರ್ಪಿಸುವ ರು. ಈ ಹಬ್ಬಕ್ಕೆ ಎಲ್ಲರೂ ಹೊಸ ಬಟ್ಟೆಯನ್ನು ಹೊಲಿಸಿಕೊಳ್ಳುತ್ತಾರೆ. ಹಿರಿಯರ ಪೂಜೆಗಾಗಿ ಹೊಸ ಬಟ್ಟೆಗಳನ್ನು ತಂದಿರುತ್ತಾರೆ. ಈ ಹಬ್ಬದಲ್ಲಿ ಇವರು ಹಂದಿಯನ್ನು ಕಡಿದು ಹಿರಿಯರಿಗೆ ಎಡೆಯನ್ನು ಹಾಕುತ್ತಾರೆ.

**ಗ್ರಾಮದೇವತೆಗಳು:** ಕೊರಮ ಸಮುದಾಯದಲ್ಲಿ ಕೆಲವು ಕಡೆಗಳಲ್ಲಿ ಮರಗಮ್ಮ, ಮಾತಂಗೆಮ್ಮ, ಹುಲಿಗೆಮ್ಮ, ಎಲ್ಲಮ್ಮ, ಪ್ಲೇಗಿನಮ್ಮ, ನಾಡಮ್ಮ, ಗಿಡದಮ್ಮ ಇತ್ಯಾದಿ ಶಕ್ತಿ ದೇವತೆಗಳ ಉಪಾಸನೆಯನ್ನು ಇವರು ಮಾಡುತ್ತಾರೆ. ಈ ದೇವತೆಗಳಲ್ಲಿ ಕುಟುಂಬದ ರಕ್ಷಣೆ, ಹಟ್ಟಿಯ ರಕ್ಷಣೆ ಮಾಡುವಂತೆ ಬೇಡಿಕೊಳ್ಳುತ್ತಾರೆ. ನಿಗದಿಪಡಿಸಿದ ದಿನದಂದು

ಊರ ಹೊರಗೆ ಬೇವಿನ ಮರದ ಬುಡದಲ್ಲಿ ಗದ್ದುಗೆಯನ್ನು ಮಾಡಿ ಮೂರು ಸಣ್ಣ ಕಲ್ಲುಗಳನ್ನಿಟ್ಟು ಅರಿಷಿಣ, ಕುಂಕುಮವನ್ನು ಹಚ್ಚಿ ಪ್ಲೇಗಿನಮ್ಮನನ್ನು, ಹಾಗೆಯೇ ಊರ ನಿರ್ಜನ ಪ್ರದೇಶಗಳಲ್ಲಿ ನಾಡಮ್ಮನನ್ನು ಪ್ರತಿಷ್ಠಾಪಿಸಿ ಸಮುದಾಯದವರೆಲ್ಲರು ಆರತಿ ಬಾನ ಮಾಡಿ ಕೋಳಿ, ಕುರಿಗಳನ್ನು ಬಲಿ ನೀಡುವರು. ಅಂದು ಬಲಿ ನೀಡಿದ ಮಾಂಸವನ್ನು ಅಡುಗೆ ಮಾಡಿ ನೈವೇದ್ಯವನ್ನು ಹಾಕಿ ಹಬ್ಬ ಆಚರಿಸುತ್ತಾರೆ.

ಹನುಮಂತ ದೇವರಲ್ಲಿ ಇವರಿಗೆ ಅಪಾರ ಭಕ್ತಿ. ತೀರ ಹಿಂದುಳಿದವರಲ್ಲಿ ಭೂತಾರಾಧನೆಗೆ ಮಹತ್ವವಿದೆ. ಕೊರಚರ ಮುಖ್ಯ ದೇವತೆ ತಿರುಪತಿ ವೆಂಕಟರಮಣ ಈ ದೇವರನ್ನು ತಿಮ್ಮಪ್ಪನೆಂದು ಕರೆಯುತ್ತಾರೆ. ಕೆಲವಡೆ ಮುನೀಶ್ವರನೆಂಬ ಭೂತದ ಪೂಜೆ ಹೆಚ್ಚು ಬಳಕೆಯಲ್ಲಿದೆ. ಶಿವಮೊಗ್ಗದ ಗೋಪಾಳದಲ್ಲಿ ಪ್ರತ್ಯೇಕವಾದ ತಮ್ಮದೇ ಸಮುದಾಯಕ್ಕೆ ಸಂಬಂಧಿಸಿದ ದೇವಸ್ಥಾನಗಳನ್ನು ಕಟ್ಟಿಕೊಂಡು ಪೂಜಿಸುತ್ತಾರೆ.

ಮಾರೆಮ್ಮ, ಭೂತಪ್ಪ, ಕಣಿಮೆಮಾರಿ, ಯಲ್ಲಮ್ಮ, ಸಿರಿಸಿಮಾರಿ, ಹನುಂತರಾಯ, ಕೊಲ್ಲಾಪುರದಮ್ಮ, ತಿರುಪತಿ ತಿಮ್ಮಪ್ಪ ಹೀಗೆ ತಮ್ಮ ಮನೆತನದ ದೇವರುಗಳನ್ನು ಬಿದಿರಿನಿಂದ ಮಾಡಿದ ಪೆಟ್ಟಿಗೆಯಲ್ಲಿ ಇರಿಸಿ ಅದನ್ನು ಮುಚ್ಚಿ ಭದ್ರಪಡಿಸಿರುತ್ತಾರೆ. ವಾರದ ದಿನಗಳು, ಹಬ್ಬಗಳಲ್ಲಿ ಮಾತ್ರ ಆ ದೇವತೆಗಳನ್ನು ತೆಗೆದು ಪೂಜಿಸುತ್ತಾರೆ. ಕೆಲವು ಗುಡಿಗಳಲ್ಲಿ ದೇವತಾ ವಿಗ್ರಹಗಳು ಜಗುಲಿಯ ಮೇಲೆ ಸದಾ ಇರುವುದು ದಕ್ಷಿಣ ಕರ್ನಾಟಕದಲ್ಲಿ ಮಾತ್ರವಾಗಿದ್ದು, ಮತ್ತೆಲ್ಲಿಯೂ ಕೊರಮರಲ್ಲಿ ಕಂಡುಬರುವುದಿಲ್ಲ.

**ಹಿರಿಯರ ಪೂಜೆ**

ಕೊರಮರಲ್ಲಿ ಪೂರ್ವಜರ ಆರಾಧನೆ ಪ್ರಮುಖವಾಗಿದೆ. ದೀಪಾವಳಿ ಅಥವಾ ಮಹಾನವಮಿಯಲ್ಲಿ ಇದನ್ನು ನೆರವೇರಿಸುತ್ತಾರೆ. ಇದಕ್ಕೆ ಎಡೆ ಇಡುವುದು ಎನ್ನುತ್ತಾರೆ. ಮನೆಮಾರುಗಳನ್ನು ಸಾರಿಸಿ ಶುಚಿಗೊಳಿಸುತ್ತಾರೆ, ಬಾಗಿಲಿಗೆ ತೋರಣ ಕಟ್ಟಿ ಅಲಂಕರಿಸಿ ಕುಟುಂಬದ ಎಲ್ಲ ಸದಸ್ಯರು ಅಂದು ಸ್ನಾನಮಾಡಿ ಶುಭ್ರವಾದ ಬಟ್ಟೆಗಳನ್ನು ತೊಟ್ಟು ನೆಂಟರಿಷ್ಟರನ್ನೂ ಕೂಡಿಕೊಂಡು ವರ್ಷಕ್ಕೊಮ್ಮೆ ಹಿರಿಯರ ಪೂಜೆ ಮಾಡುವರು ಈ ಹಬ್ಬ ಮಾಡುವುದರಿಂದ ತಮ್ಮ ಸಂಸಾರದಲ್ಲಿ ಕಷ್ಟನಷ್ಟಗಳು ಉದ್ಭವಿಸುವುದಿಲ್ಲ. ವಂಶಾಭಿವೃದ್ಧಿ, ದನಕರುಗಳು ಅಭಿವೃದ್ಧಿಯಾಗುತ್ತದೆ ಎಂದು ನಂಬುತ್ತಾರೆ; ಈ ಹಬ್ಬದಲ್ಲಿ ಕೆಲವರು ಕುರಿ, ಕೋಳಿಗಳನ್ನು ಕಡಿಯುತ್ತಾರೆ ಹಾಗೆ ಹಂದಿಯನ್ನೂ ಸಹ ಕಡಿಯುವುದುಂಟು. ಅಂದು ಮನೆಯ ಮುಖಂಡ ಉಪವಾಸಿದ್ದು ರಾತ್ರಿ ಪೂಜೆಗೆ ಎಡೆ ಹಾಕಿದನಂತರ ಊಟಮಾಡುತ್ತಾನೆ.

ನಡುಮನೆ ಅಥವಾ ಅಡುಗೆಮನೆಯಲ್ಲಿ ಎಡೆ ಹಾಕಲು ಬೇಕಾಗುವಷ್ಟು ಸ್ಥಳದಲ್ಲಿ ಸಾರಿಸಿ ಮಧ್ಯೆ ತುಂಬಿದ ಕಳಸವನ್ನಿಟ್ಟು ಅದಕ್ಕೆ ಕುಂಕುಮ, ಅರಿಶಿಣ ಹಚ್ಚಿ, ಹೂವುಗಳಿಂದ ಅಲಂಕರಿಸಿ ಮಾಡಿಸಿಟ್ಟುಕೊಂಡಿರುವ ಹಿರಿಯರ ಬೆಳ್ಳಿಯ ಮುಖ ಹಾಗೂ ಬೆಳ್ಳಿಯ ತಾಳಿಗಳನ್ನು ಕಳಸಕ್ಕೆ ಹಾಕಿ ಕಟ್ಟುತ್ತಾರೆ. ಕಳಸದ ಅಕ್ಕಪಕ್ಕ ದೀಪಗಳನ್ನು ಇರಿಸಿ ಕಳಸದ ಮುಂದೆ ಬಿಡಲ ಎಲೆಗಳನ್ನು ಹಾಸಿ ಬೆಸ ಸಂಖ್ಯೆಯ ಎಡೆಗಳನ್ನು ಹಾಕುತ್ತಾರೆ. ಮನೆಯಲ್ಲಿ ತಯಾರಿಸಿದ ಅನ್ನ, ಹುರಿದ ಮಾಂಸ, ಸಾರು, ಈರುಳ್ಳಿಯ ತುಂಡು,

ಎಲೆಅಡಿಕೆ, ತಂಬಾಕು, ಬೀಡಿ, ಸಿಗರೇಟು, ಸಾರಾಯಿ ಹೀಗೇ ಹಿರಿಯರು ಉಪಯೋಗಿಸುತ್ತಿದ್ದ ಎಲ್ಲ ವಸ್ತುಗಳನ್ನು ಎಡೆಯಾಗಿ ಇರಿಸುತ್ತಾರೆ.

ಈ ಎಡೆಗಳಲ್ಲಿ ಒಂದು ಮಾತ್ರ ಮನೆತನದ ಹಿರಿಯರಿಗಾಗಿ ಮೀಸಲಾಗಿದ್ದು ಅದನ್ನು ದೊಡ್ಡೆಡೆ ಅಥವಾ ಪೆದ್ದೆಡೆ ಎಂಬುದಾಗಿ ಕರೆಯುತ್ತಾರೆ. ಉಳಿದ ಎಡೆಗಳು ಚಿಕ್ಕದಾಗಿರುತ್ತವೆ. ಇವರಲ್ಲಿ ಅನ್ಯ ಸಮುದಾಯದ ಮೇಲವರ್ಗದ ಜಾತಿಯ ಹೆಂಗಸನ್ನು ಮದುವೆಯಾಗಿ ಅವರು ಸತ್ತಿದ್ದರೆ ಅಂಥವರಿಗೆ ಪ್ರತ್ಯೇಕ ಎಡೆಯನ್ನು ಹಾಕುವ ಪದ್ಧತಿ ಇವರಲ್ಲಿದೆ. ಪೆದ್ದೆಡೆಯನ್ನು ಉಪವಾಸವಿದ್ದ ಹಿರಿಯರು ಊಟ ಮಾಡಿದರೆ ಉಳಿದ ಎಡೆಗಳನ್ನು ಪ್ರಸಾದವೆಂದು ಇನ್ನುಳಿದವರು ಹಂಚಿ ತಿನ್ನುತ್ತಾರೆ.

### ಮಾಟಮಂತ್ರ

ಕೊರಮ ಬುಡಕಟ್ಟಿನಲ್ಲಿ ಕೆಲವರು ವ್ಯಕ್ತಿಯ ಒಳಿತಿಗೆ, ಕೆಡುಕಿಗೆ ಮಾಟವನ್ನು ಮಾಡುತ್ತಿದ್ದುದು ತಿಳಿದುಬರುತ್ತದೆ. ಒಂದು ಕಾಲಕ್ಕೆ ಹೊಲೆಮಸಣಿ ಎಂಬ ಉಗ್ರ ದೇವತೆಯನ್ನು ಮಣ್ಣಿನಲ್ಲಿ ಮಾಡಿ ಪೂಜಿಸಿ ಬಲಿ ಕೊಟ್ಟು ಉದ್ದೇಶಿತ ವ್ಯಕ್ತಿಗೆ ತೊಂದರೆ ಕೊಡುತ್ತಿದ್ದ ಬಗ್ಗೆ ತಮ್ಮ ಹಿರಿಯರು ಹಿಂದೆ ಹೇಳುತ್ತಿದ್ದರೆಂದು ಬಿದರೇಗುಡಿಯ ಪಾಪಯ್ಯ ಅವರು ಹೇಳುತ್ತಾರೆ. ಶಾಂತಿ ಮಾಡುವಾಗ, ಬಾಲಗ್ರಹ ಬಿಡಿಸುವಾಗ, ತಮ್ಮ ಇಷ್ಟ ದೈವವನ್ನು ನೆನೆಯುತ್ತ ಪೀಡೆಯನ್ನು ಪರಿಹರಿಸುವಲ್ಲಿ ರಕ್ಷಣಾ ಮಾಟ ಮಾಡುವುದು ಕಂಡುಬಂದರೆ, ಕಳ್ಳತನ, ದರೋಡೆ ಮಾಡುವಾಗ ತಮ್ಮ ಕುಲದೇವತೆ, ಮನೆದೇವತೆಗಳನ್ನು ಪೂಜಿಸಿ, ಮೂದೇವಿ ಎಂಬ ನಿದ್ರಾದೇವಿಯನ್ನು ಆರಾದಿಸಿ ತಮ್ಮ ಕೆಲಸ ಸಾಧಿಸಿಕೊಳ್ಳುತ್ತಿದ್ದುದರಲ್ಲಿ ವಿನಾಶಾತ್ಮಕ ಮಾಟದ ರೂಪವನ್ನು ಕಾಣಬಹುದು. ಮಾಟ ಮಾಡುವುದು ಇವರಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕೊರಮ ಸಮುದಾಯದ ಒಟ್ಟಾರೆಯ ಒಂದು ವೃತ್ತಿಯಾಗಿ ಬೆಳೆದು ಬಂದ ಮಾಹಿತಿಗಳಿಲ್ಲ. ಆದರೆ ಕಳವು, ವಂಚನೆ, ದರೋಡೆ ಮುಂತಾದ ವಿದ್ಯೆಗಳಲ್ಲಿ ಇವರನ್ನು ಮೀರಿಸುವ ಇನ್ನೊಂದು ಸಮುದಾಯವಿದ್ದಂತೆ ತೋರುವುದಿಲ್ಲ. ಯಕ್ಷಿಣಿ ತಂತ್ರಕ್ಕಿಂತಲೂ ಹೆಚ್ಚಾಗಿ ಈ ಕೈಚಳಕ, ಸಮಯ ಪ್ರಜ್ಞೆ, ಅಷ್ಟೇ ವ್ಯವಹಾರಜ್ಞಾನ ತಿಳಿದ ಸಮುದಾಯ ಇದಾಗಿದೆ.

### ಜನಪದ ನಂಬಿಕೆಗಳು

ಹಲವಾರು ಅಲೆಮಾರಿ ಸಮುದಾಯಗಳಲ್ಲಿ ದೈವತ್ವವಾಗಿ ಭಾವನೆಗಳು, ನಂಬಿಕೆಗಳು ಕಿಂಚಿತ್ತೂ ಬದಲಾಗದೆ ಅಚಲವಾಗಿ ಉಳಿದು ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು. ನಂಬಿಕೆಗಳು ಜನಪದ ಜೀವನದಲ್ಲಿ ಅಸಾಧಾರಣವಾದ ಪಾತ್ರವಹಿಸುತ್ತಾ ಬಂದಿವೆ. ಯಾವುದೋ ಒಂದು ಅವ್ಯಕ್ತ ಶಕ್ತಿ ಜನತೆಯ ಬದುಕನ್ನು ನಿಯಂತ್ರಿಸುತ್ತಿದೆ ಯಾದ್ದರಿಂದ ಸಾಮಾನ್ಯ ಮತ್ತು ಅಸಾಮಾನ್ಯಗಳ ಮಧ್ಯ ಕಂಡುಬರುವ ವ್ಯತ್ಯಾಸಗಳೇ ನಂಬಿಕೆಗಳ ಮೂಲ. ಈ ಸಮಾಜದಲ್ಲಿ ನಂಬಿಕೆ ಕಳೆದುಕೊಂಡವರಿಗೆ ಬದುಕಿಲ್ಲ ಎಂತಲೇ ಹೇಳಬಹುದು. ಮಾನವ ಮಾನಸಿಕ ತೋಳಲಾಟಕ್ಕೆ ಎಂದು ಒಳಗಾದನೋ ಅಂದೇ ಅವನು ನಂಬಿಕೆಗಳಿಗೆ ಮಾರುಹೋದ. ಇಂತಹ ಮಾರುಹೋಗುವಿಕೆಗೆ

ನಿಸರ್ಗದಲ್ಲಿರುವ ಶಕ್ತಿಗಳೇ ಕಾರಣವಾಗಿರಬೇಕು. ಪ್ರಬುದ್ಧ ಧರ್ಮಗಳು ಬೆಳೆದು ಬಳಕೆಗೆ ಬರುವ ಮುನ್ನ ನೈಸರ್ಗಿಕ ಧರ್ಮಗಳು ನಂಬಿಕೆಗಳನ್ನು ಸ್ವೀಕರಿಸಿದ ಹಿನ್ನೆಲೆ ಎಂದರೆ ಅತಿಮಾನುಷ ಭಯ.

ವೈಜ್ಞಾನಿಕ ಪರಿಶೋಧನೆಗೆ ಒಳಗಾಗುವ ಮುನ್ನ ಸೂರ್ಯ, ಚಂದ್ರ, ನಕ್ಷತ್ರ, ಭೂಮಿ, ಸಿಡಿಲು, ಮಿಂಚು, ಬಿರುಗಾಳಿ, ನದಿ, ಅಗ್ನಿ ಮೊದಲಾದವುಗಳಿಂದ ಭಯ ಗೊಂಡ ಮಾನವ ಅವುಗಳನ್ನು ಪೂಜಿಸತೊಡಗಿದ ಹಾಗೂ ಅವುಗಳಿಗೆ ದೈವತ್ವವನ್ನು ನೀಡಿದನು.

ಕೊರಮ ಸಮುದಾಯದವರು ಶಕುನಗಳಲ್ಲಿ ಹೆಚ್ಚು ನಂಬಿಕೆವುಳ್ಳವರಾಗಿದ್ದಾರೆ. ತಮ್ಮ ಯಾವುದೇ ಕೆಲಸ ಕಾರ್ಯಗಳು ಉತ್ತಮ ರೀತಿಯಲ್ಲಿ ನಡೆಯಲು ತಮ್ಮ ಮನೆ ದೇವರುಗಳಿಗೆ ಹಾಗೂ ಕುಲದೇವತೆಗಳನ್ನು ಪ್ರಾರ್ಥಿಸಿಕೊಳ್ಳುತ್ತಾರೆ.
ತಮ್ಮ ಕೆಲಸ ಕಾರ್ಯಗಳಿಗೆ ಹೊರಟಾಗ ವಿಧವೆಯರು, ಹಾಲಿನ ಕೊಡ, ಮೂತ್ರಿಸುವ ನಾಯಿ, ಡುರಿಕೆ ಹಾಕುವ ಹೋರಿ ಕಂಡರೆ ಅಪಶಕುನ. ಏಳನೆಯ ಅಂಕಿ ಅವರಿಗೆ ಅಶುಭ. ಒಂದು ಹೋತಿನ ಕೋಡಿಗೆ ಕೆಂಪುದಾರ, ಕೊರಳಿಗೆ ಬೇವಿನ ಟೊಂಗೆ ಅರಿಷಿಣ ಕೊಂಬುಗಳಿಂದ ಕೂಡಿದ ಹಾರವನ್ನು ಕಟ್ಟಿ ಅದನ್ನು ದೇವತೆಯ ಮುಂದೆ ನಿಲ್ಲಿಸುತ್ತಾರೆ. ತೆಂಗಿನಕಾಯಿ ಒಡೆದು ತಾವು ಕೈಗೊಳ್ಳಲಿರುವ ಕೆಲಸಕಾರ್ಯವನ್ನು ಬಿಡಬೇಕೋ, ಮಾಡಬೇಕೋ ಎಂದು ಕೇಳುತ್ತಾರೆ. ಆಗ ಹೋತು ಮೂತ್ರ ವಿಸರ್ಜಿಸಿದರೆ ಅದು ಅಶುಭ ಸೂಚನೆಯಾಗಿರುತ್ತದೆ. ಇದರಂತೆ ದೇವತೆಯ ಎದುರು ಕೋಳಿ ಯೊಂದನ್ನು ಕೊಯ್ದು ಅದರ ಎದುರು ಕುಳಿತು ಹಲ್ಲಿ ನುಡಿಯುವ ದಿಕ್ಕಿನಿಂದ ಶುಭ ಅಶುಭಗಳನ್ನು ಕೇಳುತ್ತಾರೆ. ರವಿವಾರ ಕೆಲಸ ಕಾರ್ಯಗಳಿಗೆ ಶುಭದಿನವಲ್ಲವೆಂಬ ನಂಬಿಕೆ ಇವರದ್ದಾಗಿದೆ.

೬

# ಒಳಾಡಳಿತ ವ್ಯವಸ್ಥೆ

ಸಮುದಾಯದ ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗಲು ತಮ್ಮದೇ ಆದ ಪ್ರತ್ಯೇಕ ನ್ಯಾಯ ಪಂಚಾಯತಿಗಳ ವ್ಯವಸ್ಥೆಯನ್ನು ಕೊರಮರು ಮಾಡಿಕೊಂಡಿರುತ್ತಾರೆ. ಇದಕ್ಕೆ ಜಾತಿ ಪಂಚಾಯಿತಿ ಎಂದು ಕರೆಯುತ್ತಾರೆ. ಸಮುದಾಯದ ಮುಖಂಡನೇ ನ್ಯಾಯ ಪಂಚಾಯತಿಗೂ ಮುಖಂಡನಾಗಿರುತ್ತಾನೆ. ಜಾತಿ ಪಂಚಾಯಿತಿಯ ಸದಸ್ಯರನ್ನು ಹಿರಿಯರು, ಯಜಮಾನರು, ಸಮಾಜದವರು, ದೈವದವರು ಎಂದು ಕರೆಯುವ ವಾಡಿಕೆಯಿದೆ.

ಕೊರಮರು ತಮ್ಮ ಈ ಜಾತಿ ಪಂಚಾಯಿತಿಗೆ ಕುಲಂ, ಕುಲಸಭೆ ಅಥವಾ ಕುಲ ಪಂಚಾಯಿತಿ ಎಂದು ಕರೆಯುತ್ತಾರೆ. ಕೊರಮ ಸಮುದಾಯವು ಸಂಪೂರ್ಣವಾಗಿ ಕುಲಪತಿಯ ಆಡಳಿತಕ್ಕೆ ಒಳಪಟ್ಟಿದೆ. ಪ್ರಾದೇಶಿಕವಾರು ಕುಲಪಂಚಾಯಿತಿಯ ಮುಖ್ಯಸ್ಥನನ್ನು ಪೆರುಮನುಷನ್ ಅಥವಾ ಬರಿಯ ಮನುಷನ್, ಬೆರು ಮನುಷ್ಯ, ಕಟ್ಟೆಯಜಮಾನ ಎಂಬಿತ್ಯಾದಿಯಾಗಿ ಕರೆಯುತ್ತಾರೆ. ಕಟ್ಟೆಮನಿಯವರು ನಡೆಸುವ ಕುಲಪಂಚಾಯತಿಯಲ್ಲಿ ಎಂಟು ಜನ ಹಿರಿಯರು ಸದಸ್ಯರಾಗಿರುತ್ತಾರೆ. ಈ ಎಂಟು ಜನ ಹಿರಿಯರನ್ನು ಅವರ ಬುದ್ದಿ, ವಯಸ್ಸು ಮತ್ತು ಯೋಗ್ಯತೆಯ ಆಧಾರದ ಮೇಲೆ ಆಯ್ಕೆ ಮಾಡುವರು. ದೀಪಸಣ್ಣವರು ನಡೆಸುವ ಕುಲಪಂಚಾಯತಿಯಲ್ಲಿ ಎಂಟು ಜನ ಹಿರಿಯಸದಸ್ಯರಿರುವರು. ಇದರಲ್ಲಿ ಒಬ್ಬ ಅಧ್ಯಕ್ಷನಾಗಿರುವನು. ಈ ಅಧ್ಯಕ್ಷತೆಯು ವಂಶಪಾರಂಪರ್ಯವಾಗಿ ಬಂದಿದ್ದರೂ ಅಧ್ಯಕ್ಷತೆಗೆ ಅನುಭವ ಮುಖ್ಯ. ಹೀಗಾಗಿ ನ್ಯಾಯ ನಿರ್ಣಯ ಮಾಡುವ ಸದಸ್ಯರಲ್ಲಿ ಹಿರಿಯ ಅನುಭವಿಕರು ಕೆಲವೊಮ್ಮೆ ಅಧ್ಯಕ್ಷರಾಗುವರು. ಇದಕ್ಕೆ ಎಂಟು ಜನರ ಸಮ್ಮತಿಯೂ ಬೇಕಾಗುತ್ತದೆ. ಇವರಲ್ಲಿ ನ್ಯಾಯ ಹಿಡಿದು ಮಾತನಾಡುವುವವರನ್ನು ಓಕಾಳಿಗಳು ಎಂದು ಕರೆಯುತ್ತಾರೆ. ಇವರೇ ನ್ಯಾಯಧೀಶರಾಗಿದ್ದು, ಸಾಮಾಜಿಕ ಹಾಗೂ ಸಾಮೂಹಿಕ ನ್ಯಾಯ ನಿರ್ಣಯ ಪದ್ಧತಿ ಜಾರಿಗೊಳಿಸುತ್ತಾರೆ. ಇವರಲ್ಲಿ ಒಬ್ಬ ಕೋಲಕಾರನಿದ್ದು ಅವನು ಯಜಮಾನ ಹೇಳಿದ ಸುದ್ದಿಯನ್ನು ಕೇರಿಯಲ್ಲಿ ಸಾರುವುದು ಮತ್ತು ಬೇಕಾದವರನ್ನು ಕರೆದುಕೊಂಡು ಬರುವ ಕೆಲಸ ಮಾಡುತ್ತಾನೆ. ಇವನಿಗೆ ಬಿಜಾಪುರ ಹಾಗೂ ಉತ್ತರ ಕರ್ನಾಟಕದ ಕಡೆ ತಳವಾರನೆಂದು ಕರೆಯುವರು.

ಹೈದ್ರಾಬಾದ್ ಕರ್ನಾಟಕದ ಪ್ರದೇಶದಲ್ಲಿ ಕುಲಪಂಚಾಯಿತಿಗೆ ಓಕಾಳಂಗ ಸಭೆ ಎಂದು ಕರೆಯುವರು. ಈ ಸಭೆಯು ಅಧ್ಯಕ್ಷತೆಯನ್ನು ಓಕಾಳಿ (ಗಂಡು) ಓಕಾಳ್ಸಿ (ಹೆಣ್ಣು) ವಹಿಸುವರು.

**ಪಂಚಾಯತಿ ಕಾರ್ಯಗಳು**

ಉತ್ತರ ಕರ್ನಾಟಕದ ಪ್ರದೇಶಗಳಲ್ಲಿ ಕಟ್ಟಿಮನಿಯವರು ಮತ್ತು ದೀಪಸಣ್ಣವರು ನಡೆಸುವ ಸಭೆಗಳಿಗೂ, ಹೈದ್ರಾಬಾದ್ ಕರ್ನಾಟಕದ ಓಕಾಳಿಗಳು ನಡೆಸುವ ಸಭೆಗಳಿಗೂ, ದಕ್ಷಿಣ ಕರ್ನಾಟಕದ ಪೆರುಮನುಷ್ಯರು ನಡೆಸುವ ಸಭೆಗಳಿಗೂ ವ್ಯತ್ಯಾಸವಿದೆ. ಉತ್ತರ ಕರ್ನಾಟಕದ ಕಟ್ಟಿಮನಿಯವರು ಹಾಗೂ ದೀಪಸಣ್ಣವರ ಪಂಚಾಯತಿ ಕಾರ್ಯ ಚಟುವಟಿಕೆಗಳು ಜನರಹಿತ ಪ್ರದೇಶಗಳಲ್ಲಿ ನಡೆಯುತ್ತವೆ. ಕಟ್ಟಿಮನಿಯವರು ನಡೆಸುವ ಸಭೆಗಳಿಗೆ ದೀಪಸಣ್ಣವರು ಭಾಗವಹಿಸುವುದಿಲ್ಲ. ದೀಪಸಣ್ಣವರ ಸಭೆಗೆ ಇವರು ಭಾಗವಹಿಸುವಂತಿಲ್ಲ. ಮೊದಲೆ ನಿಗದಿಪಡಿಸಿದ ಹಾಗೂ ನಿರ್ಧರಿಸಿದ ಸ್ಥಳದಲ್ಲಿ ಎಲ್ಲ ಹಿರಿಯರು ಸೇರುವರು. ಸಾಮಾನ್ಯವಾಗಿ ಹುಡುಗರನ್ನು ಸೇರಿಸುವುದಿಲ್ಲ. ಮೊಟ್ಟಮೊದಲು ಕಂಬಳಿ ಹಾಸಿ ಅದರ ಮೇಲೆ ದೀಪದ ಕಡ್ಡಿ ಎಸೆಯುವರು. ಎಸೆದ ಕಡ್ಡಿಗಳ ಆಧಾರದ ಮೇಲೆ ಎಷ್ಟು ದಿನಗಳಲ್ಲಿ ನ್ಯಾಯ ನಿರ್ಣಯ ನಡೆಯಬಹುದೆಂದು ನಿರ್ಧರಿಸುವರು. ಎರಡು ಪಕ್ಷದವರಿಂದ ಹಣವನ್ನು ಸಂಗ್ರಹಿಸಿ ಖರ್ಚು ಮಾಡುವರು. ನ್ಯಾಯ ಅನ್ಯಾಯಗಳನ್ನು ಪರಿಶೀಲಿಸಿ ತಪ್ಪುದಂಡ ವಿಧಿಸುತ್ತಾರೆ. ಪಂಚಾಯತಿಯ ಖರ್ಚು ಕಳೆದು ನಂತರ ಉಳಿದ ಹಣ ವಾಪಸ್ಸು ನೀಡುವರು. ಕಟ್ಟಿಮನಿಯವರ ನ್ಯಾಯ ನಿರ್ಣಯಗಳು ಗದಗ ಸೆಟ್ಲಮೆಂಟಿನ ಸುತ್ತಮುತ್ತಲಿರುತ್ತವೆ. ಗದಗ ಸೆಟ್ಲಮೆಂಟಿನ ವ್ಯವಹಾರಗಳೆಲ್ಲ ಅನೈತಿಕವಾಗಿವೆ.

ಆದರೆ ದೀಪಸಣ್ಣವರು ನಡೆಸುವ ಸಭೆಗಳು, ನೀತಿ ನಿಯಮಗಳಿಗೆ ಒಳಪಟ್ಟು ಸಂಪ್ರದಾಯಬದ್ಧವಾಗಿರುತ್ತವೆ. ಇಲ್ಲಿಯ ಕಾರ್ಯ ಚಟುವಟಿಕೆಗಳು ಒಂದೇ ನಿರ್ಣಯದ ಮೇಲೆ ಆಧಾರಿತವಾಗಿರುತ್ತವೆ. ಗದಗ ಸೆಟ್ಲಮೆಂಟಿನ ವ್ಯವಹಾರಗಳಲ್ಲಿ ಪಾತ್ರಧಾರಿಗಳು ಕೊರವರಾದರೆ ಸೂತ್ರಧಾರಿಗಳು ಸಮಾಜದ ಪ್ರತಿಷ್ಠಿತ ವ್ಯಕ್ತಿಗಳಾಗಿರುತ್ತಾರೆ.

ಹೈದ್ರಾಬಾದ್ ಕರ್ನಾಟಕದ ಓಕಾಳಂಗ ಸಭೆಯ ಕಾರ್ಯ ಚಟುವಟಿಕೆಗಳು ಊರ ಹೊರಗಿನ ಜನ ಸಂಪರ್ಕವಿಲ್ಲದ ಒಂದು ನಿಗದಿತ ಸ್ಥಳದಲ್ಲಿ ನಡೆಯುತ್ತದೆ. ಇಲ್ಲಿ ಕಂಬಳಿ ಹಾಸಿ ಕಡ್ಡಿ ಹಾಕುವ ಪದ್ಧತಿ ಇರುವುದಿಲ್ಲ. ಸಭೆಯು ಒಂದು ಗಿಡದ ಕೆಳಗೆ ಓಕಾಳಿಯ ಸಮಕ್ಷಮದಲ್ಲಿ ನಡೆಯುವುದು. ನ್ಯಾಯನಿರ್ಣಯದ ಸಭೆಯು ಒಂದು ದಿನದಿಂದ ಏಳು ದಿನಗಳವರೆಗೆ ನಡೆಯುತ್ತದೆ. ಹೀಗೆ ದಕ್ಷಿಣ ಕರ್ನಾಟಕದಲ್ಲಿ ನಡೆಯುವ ಕುಲ ಪಂಚಾಯಿತಿಯೂ ಸಹ ಜನರಹಿತ ಪ್ರದೇಶಗಳಲ್ಲಿ ನಡೆಯುತ್ತವೆ. ಸಾಮೂಹಿಕ ನ್ಯಾಯ ನಿರ್ಣಯದ ಮೂಲಕ ನ್ಯಾಯ ತೀರ್ಮಾನವಾಗುತ್ತದೆ. ಕುಲ ಪಂಚಾಯತಿ ಕನಿಷ್ಠ ಒಂದು ದಿನದಿಂದ ಗರಿಷ್ಠ ವಾರದವರೆಗೆ ನಡೆಯುವುದು. ಇವರಲ್ಲಿ ಬಹುತೇಕ ಜನ ಕೋರ್ಟು ಕಛೇರಿಯ ಗೋಜಿಗೆ ಹೋಗುವುದಿಲ್ಲ.

## ನ್ಯಾಯ ನಿರ್ಣಯಗಳು

ಕುಲಂ ಅಥವಾ ಕುಲಸಭೆ ಪದ್ಧತಿಯು ಸಮುದಾಯದಲ್ಲಿ ಸಂಭವಿಸುವ ಯಾವುದೇ ಜಗಳ, ಹಿಂಸೆ, ಅತ್ಯಾಚಾರ, ಅಂತರಜಾತಿಯ ವಿವಾಹ, ಅನೈತಿಕ ಸಂಬಂಧಗಳು, ಕಳ್ಳತನ, ಸಣ್ಣಪುಟ್ಟ ವ್ಯಜ್ಯಗಳು ಹಾಗೂ ಒಳಜಗಳ ಇಲ್ಲವೇ ಜಟಿಲ ಸಮಸ್ಯೆ, ಜಾತಿ ಬಹಿಷ್ಕಾರ ಮೊದಲಾದವುಗಳನ್ನು ಬಗೆಹರಿಸುವ ಕಾರ್ಯ ಮಾಡುತ್ತವೆ. ಅಪರಾಧಿಗಳನ್ನು ಗುರುತಿಸಿ ಶಿಕ್ಷಿಸುವ ಮತ್ತು ನಿರಾಪರಾಧಿಗಳಿಗೆ ನ್ಯಾಯ ಒದಗಿಸಿ ಸಮುದಾಯದ ಹಿತದೃಷ್ಟಿಯನ್ನು ಕಾಯ್ದು ಕೊಳ್ಳುವುದೇ ನ್ಯಾಯ ಪಂಚಾಯತಿಯ ಉದ್ದೇಶವಾಗಿರುತ್ತದೆ.

ಕರ್ನಾಟಕದ ಕೊರವರ ಕುಲಪಂಚಾಯತಿಯನ್ನು ಬೇರೆ ಬೇರೆ ಹೆಸರುಗಳಿಂದ ಕರೆದರೂ ಕಾರ್ಯವಿಧಾನಗಳು ಬಹುತೇಕ ಒಂದೇ ರೀತಿಯಲ್ಲಿರುತ್ತವೆ. ಕುಲ ಪಂಚಾಯತಿಗಳು ಅಪರಾಧಿ ಮತ್ತು ಫಿರ್ಯಾದಿದಾರರ ಮನವಿಯ ಮೇರೆಗೆ ನಡೆಯುತ್ತದೆ. ವಾದಿ ಪ್ರತಿವಾದಿಗಳ ಮಾತುಗಳನ್ನು ಕೇಳಿ ನ್ಯಾಯ ನಿರ್ಣಯವನ್ನು ಮುಖಂಡರು ಮತ್ತು ಸದಸ್ಯರು ಅವಲೋಕಿಸಿ ತೀರ್ಪನು ನೀಡುತ್ತಾರೆ.

ಎಂಥಹ ಪ್ರಸಂಗ ಬಂದರೂ ಅನ್ಯ ಸಮುದಾಯಗಳಿಗೆ ತಮ್ಮ ಸಮುದಾಯದಲ್ಲಿ ನಡೆಯುವ ಕುಲಪಂಚಾಯಿತಿಯಲ್ಲಿ ನಡೆಯುವ ವಿಷಯಗಳು ಬಹಿರಂಗಪಡಿಸದೆ ಗೌಪ್ಯತೆಯನ್ನು ಕಾಪಾಡಿಕೊಂಡುಬರುತ್ತಾರೆ. ಬೇರೆ ಸಮುದಾಯದ ಹೆಣ್ಣನ್ನು ಮದುವೆ ಯಾದರೆ ಕುಲಪಂಚಾಯಿತಿ ದಂಡ ವಿಧಿಸುತ್ತದೆ. ಜೈಲಿಗೆ ಹೋಗಿ ಬಂದರೆ ಕುಲದಿಂದ ಬಹಿಷ್ಕರಿಸುತ್ತದೆ. ಯಾವುದೇ ಕಾರಣಕ್ಕೂ ತಪಿತಸ್ಥನು ಕುಲಸಭೆಯನ್ನು ತಿರಸ್ಕರಿಸು ವಂತಿಲ್ಲ. ಒಂದು ವೇಳೆ ತಿರಸ್ಕರಿಸಿದರೆ ಜಾತಿಯಿಂದ ಹೊರ ಹಾಕಲಾಗುತ್ತದೆ. ಕೊಲೆ, ಸುಲಿಗೆ, ದರೋಡೆಗಳಿಗೆ ತಕ್ಕಂತಹ ದಂಡ ವಿಧಿಸಲಾಗುತ್ತದೆ. ದಂಡದ ರೂಪದಲ್ಲಿ ಹಣವನ್ನು ಅಪರಾಧಿಯಿಂದ ಪಡೆಯಲಾಗುತ್ತದೆ ಹಾಗೂ ಶಿಕ್ಷೆ ನೀಡಲಾಗುತ್ತದೆ. ದಂಡದ ರೂಪದಲ್ಲಿ ಬಂದ ಹಣವನ್ನು ನಿರಾಪರಾಧಿಗೆ ನೀಡಲಾಗುತ್ತದೆ ಅಥವಾ ಸಭೆಯು ಹೆಂಡ, ಸರಾಯಿ ಕುಡಿಯುವ ಮೂಲಕ ಆ ಹಣವನ್ನು ಖರ್ಚು ಮಾಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಕೊರಮರ ಕುಲಪಂಚಾಯತಿಗಳು ಇನ್ನೂ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ.

ಕುಲಸಭೆಯ ಮುಖಂಡನಿಗೆ ವಿಶೇಷ ಗೌರವ ನೀಡುತ್ತಾರೆ. ಕುಲಪಂಚಾಯತಿ ಸಭೆಗಳಲ್ಲಿ ಹೆಣ್ಣು ನೇರವಾಗಿ ಭಾಗವಹಿಸಿ ಅಧ್ಯಕ್ಷಳಾಗಿ ನ್ಯಾಯ ನಿರ್ಣಯಿಸುವ ಪದ್ಧತಿಯನ್ನು ಹೈದ್ರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಮಾತ್ರ ಕಾಣಬಹುದಾಗಿದೆ.

## ಶಿಕ್ಷೆಗಳ ವಿವರ

ಹಿಂದಿನ ಕಾಲದಲ್ಲಿ ಅಪರಾಧಿಗಳ ವಿಚಾರಣೆ ನಡೆಸುವಾಗ ಅವರ ಕೈ ಮತ್ತು ಕಾಲುಗಳನ್ನು ಕಟ್ಟುತ್ತಿದ್ದರಂತೆ. ಹಿಂದೆ ಒಬ್ಬ ಕೊರಚ ವಿಧವೆ ಹೆಂಗಸಿನೊಂದಿಗೆ ಅಕ್ರಮ ಸಂಬಂಧ ಹೊಂದಿದ್ದಕ್ಕಾಗಿ ಜಾತಿ ಭ್ರಷ್ಟನನ್ನಾಗಿ ಮಾಡಿದರಂತೆ. ಆ ರೀತಿ ಮಾಡುವಾಗ ತಲೆಗೂದಲು ಮತ್ತು ಮೀಸೆಯನ್ನು ಬೋಳಿಸಿ ಕುತ್ತಿಗೆಗೆ ಎಲುಬಿನ

ಹಾರ ಹಾಕಿ ಕತ್ತೆ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡುತ್ತಿದ್ದರಂತೆ. ಮತ್ತೆ ಕೆಲವು ಸಂದರ್ಭಗಳಲ್ಲಿ ತಾತ್ಕಾಲಿಕವಾಗಿ ಸರ್ಜಾ ಹುಲ್ಲಿನಿಂದ ಗುಡಿಸಲನ್ನು ಹಾಕಿ ಅದನ್ನು ಅಪರಾಧಿ ಹಾದು ಹೋದ ಮೇಲೆ ಸುಟ್ಟು ಹಾಕುತ್ತಿದ್ದರು. ಆನಂತರ ಕೊರವರ ಐದು ಗುಂಪಿನವರಿಗೂ ಹಬ್ಬದೂಟವನ್ನು ಹಾಕುವುದರ ಮೂಲಕ ಅವನು ಪುನಃ ಜಾತಿಗೆ ಸೇರ್ಪಡೆ ಯಾಗುತ್ತಿದ್ದನು(ಮಾನಸ:೧೯೯೩ :೭೭).

ಕುದಿಯುವ ಎಣ್ಣೆ ಪಾತ್ರೆಯಿಂದ ಕಾಸನ್ನು ತೆಗೆಸುವುದು,

ದೇವರ ಮುಂದೆ ಪ್ರತಿವಾದಿಯಿಂದ ಹಣದ ಮೊತ್ತವನ್ನು ಇರಿಸಿ ಅದನ್ನು ವಾರಸುದಾರನಿಗೆ ತೆಗೆದುಕೊಳ್ಳುವಂತೆ ಹೇಳುವರು. ತೆಗೆದುಕೊಂಡಾಗ ಅವನಿಗೆ ಅಥವಾ ಅವನ ಕುಟುಂಬಕ್ಕೆ ಯಾವುದೇ ಕೇಡುಂಟಾಗದಿದ್ದರೆ ಅವನು ನಿರಾಪರಾಧಿ ಎಂದು ತೀರ್ಮಾನಿಸಿ ಅವನಿಗೆ ಸೇರಬೇಕಾದ ಹಣ ನೀಡುವರು.

ಕೊಲೆ, ಸುಲಿಗೆ, ದರೋಡೆ ಮುಂತಾದ ಪ್ರಕರಣಗಳ ಬಗ್ಗೆ ವಿಚಾರಣೆ ನಡೆಸಿ ತೀರ್ಪನ್ನು ನೀಡುವರು.

ಜಾತಿ ಭ್ರಷ್ಟರನ್ನು ಬಹಿಷ್ಕರಿಸಲಾಗುತ್ತದೆ.

ಚಿನ್ನದ ತಗಡನ್ನು ಚೆನ್ನಾಗಿ ಕಾಯಿಸಿ ಜಾತಿ ಭ್ರಷ್ಟರಾಗಿದ್ದವರ ನಾಲಿಗೆಗೆ ಬರೆ ಹಾಕಲಾಗುತ್ತದೆ. ತರುವಾಯ ಅವನ ಮೇಲಿದ್ದ ಕಳಂಕ ಕಳೆದುಹೋಗಿ ಕುಲದ ಒಳಕ್ಕೆ ಸೇರಿಸಿಕೊಳ್ಳಲಾಗುತ್ತದೆ.

ಅಕ್ರಮ ಸಬಂಧ ಹೊಂದಿದ್ದ ಪುರುಷ ಅಥವಾ ಸ್ತ್ರೀಯರನ್ನು, ಇಲ್ಲವೇ ಚಪ್ಪಲಿಯಿಂದ ಹೊಡೆಸಿಕೊಂಡವರನ್ನು ಮತ್ತೆ ಜಾತಿಯೊಳಕ್ಕೆ ಸೇರಿಸಿಕೊಳ್ಳಬೇಕಾದರೆ ಅವರ ಮೇಲಿರುವ ಅಪವಿತ್ರತೆಯನ್ನು ಕಳೆಯಲು ಚೆಟ್ಟಿಯವರನ್ನು ಪೂಜಾರಿಯಾಗಿ ಆಹ್ವಾನಿಸುತ್ತಾರೆ. ಹಿರಿಯರ ಅಧ್ಯಕ್ಷತೆಯಲ್ಲಿ ಒಂದು ಪಂಚಾಯಿತಿಯನ್ನು ಸೇರಿಸಿ ಅಪರಾಧಿಯ ಶೀಲದ ಬಗ್ಗೆ ವಿಚಾರಣೆ ನಡೆಯಿಸಿ ಸೂಕ್ತವಾದ ದಂಡವನ್ನು ವಿಧಿಸುತ್ತಾರೆ. ಚೆಟ್ಟಿಯು ತನ್ನ ಶುಲ್ಕವನ್ನು ಪಡೆದುಕೊಂಡ ಮೇಲೆ ಅಪರಾಧಿಯ ಹಣೆಗೆ ವಿಭೂತಿಯನ್ನು ಹಚ್ಚುತ್ತಾನೆ. ಆಗ ಆ ಅಶುದ್ಧ ವ್ಯಕ್ತಿಯು ಕೆರೆ ಅಥವಾ ಬಾವಿಗೆ ಹೋಗಿ ಸ್ನಾನ ಮಾಡಿಕೊಂಡು ಬಂದು ಪುನಃ ಸಭೆಯ ಮುಂದೆ ನಿಲ್ಲುವನು. ಚೆಟ್ಟಿಯು ಪುನಃ ಅವನಿಗೆ ವಿಭೂತಿಯನ್ನು ಹಣೆಗೆ ಹಚ್ಚಿ ಅವನನ್ನು ಶುದ್ಧ ಮಾಡುವನು.

೧. ಕುಂಬಾರರ ಮನೆಯಿಂದ ತರಿಸಿದ ಸುಡದ ಹಸೀ ಗಡಿಗೆಯಲ್ಲಿ ನೀರು ತುಂಬಿ ನ್ಯಾಯಕ್ಕಾಗಿ ಪಂಚಾಯ್ತಿಯ ಮುಂದೆ ಇರುವ ಇಬ್ಬರ ತಲೆಯ ಮೇಲೂ ಆ ಗಡಿಗೆಗಳನ್ನು ಹೊರಸಿ ಅವರನ್ನು ಗುಡಿಗೆ ಕರೆದುಕೊಂಡು ಹೋಗುತ್ತಾರೆ. ಯಾರ ತಲೆಯ ಮೇಲಿನ ಹಸೀ ಗಡಿಗೆ ಮೊದಲು ಕರಗಿ ಬೀಳುತ್ತದೆಯೋ ಅವರೇ ತಪ್ಪಿತಸ್ಥರೆಂದು ನಿರ್ಣಯಿಸುತ್ತಾರೆ.

೨. ಒಂದು ಕಬ್ಬಿಣದ ಕಡಾಯಿಯಲ್ಲಿ ಎಣ್ಣೆ ಹಾಕಿ ಕಾಯಿಸಿ ಅದರಲ್ಲಿ ನಾಲ್ಕಾಣೆ ಚೂರೊಂದನ್ನು ಹಾಕಿ ಅದನ್ನು ಬರೀಕೈಯಿಂದಲೇ ಇಬ್ಬರಿಗೂ ತೆಗೆಯಲು ಹೇಳುತ್ತಾರೆ.

ಬಿಸಿ ಎಣ್ಣೆಯಿಂದ ಯಾರ ಕೈ ಸುಡುತ್ತದೆಯೋ ಅವರೇ ತಪ್ಪಿತಸ್ಥರು ಎಂದು ತಿಳಿಯುತ್ತಾರೆ. ತಪ್ಪು ಮಾಡಿದವರ ಕೈ ಕಾದ ಎಣ್ಣೆಯಲ್ಲಿಯೂ ಸುಡದಂತೆ ಇರುತ್ತದೆ ಎಂದು ನಂಬುತ್ತಾರೆ.

೩. ಸುಡುಗಾಡಿನಲ್ಲಿನ ಬೋಕಿ ತುಂಡು (ಮಡಿಕೆಯ ಚೂರು) ಕುಟ್ಟಿ ಪುಡಿ ಮಾಡಿ, ಆ ಪುಡಿಯನ್ನು ತಪ್ಪಿತಸ್ಥನ ಕೈಯ್ಯಲ್ಲಿ ಹಾಕಿ ಆತ ತನ್ನ ಬಾಯಲ್ಲಿನ ಎಂಜಲು ಉಗುಳುಕೊಂಡು ಆ ಬೋಕಿ ಪುಡಿಯನ್ನು ಕಲೆಸಿ ಉಂಡೆ ಮಾಡಲು ತಿಳಿಸುತ್ತಾರೆ. ತಪ್ಪು ಮಾಡಿದವನ ಗಂಟಲು ಒಣಗಿ ಹೋಗಿ ಮಣ್ಣಿನ ಉಂಡೆ ಮಾಡಲು ಸಾಧ್ಯ ವಾಗುವುದಿಲ್ಲ, ಆಗ ಅವನನ್ನು ತಪ್ಪಿತಸ್ಥನೆಂದು ನಿರ್ಣಯಿಸುತ್ತಾರೆ.

೪. ದೇವರ ಗುಡಿಯಲ್ಲಿ ದೇವರ ಮುಂದೆ ಇಟ್ಟ ದುಡ್ಡನ್ನು ಪಂಚಾಯತಿಯ ಎದುರು ಎತ್ತಿಕೊಳ್ಳಲು ತಿಳಿಸುತ್ತಾರೆ. ದೆವರ ದುಡ್ಡನ್ನು ಎತ್ತಿಕೊಳ್ಳುವ ಧೈರ್ಯವಿಲ್ಲದೇ ತಪ್ಪಿತಸ್ಥ ದೇವರ ಮೇಲಿನ ಹೆದರಿಕೆಯಿಂದ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ ಎಂದು ನಂಬುತ್ತಾರೆ.

೫. ಎರಡು ಗಡಿಗೆಯಲ್ಲಿ ಅಕ್ಕಿ ಮತ್ತು ನೀರನ್ನು ಸಮನಾಗಿ ಹಾಕಿ ಸಮನಾಗಿ ಸೌದೆ ಉರಿಸಿ ಅನ್ನ ಮಾಡಿಸುತ್ತಾರೆ. ಇಬ್ಬರಲ್ಲಿ ಯಾರ ಅನ್ನ ಮೊದಲು ಕುದಿಯ ತೊಡಗುವುದೋ ಅವರು ಅಪರಾಧಿಯಲ್ಲವೆಂದು ತೀರ್ಮಾನಿಸುತ್ತಾರೆ.

## ೭

# ಆರ್ಥಿಕ ಜೀವನ

### ಮೂಲ ಕಸುಬು

ಪ್ರತಿಯೊಂದು ಸಮುದಾಯಕ್ಕೂ ಯಾವುದಾದರೊಂದು ಮೂಲ ವೃತ್ತಿ ಇದ್ದೇ ಇರುತ್ತದೆ. ಪ್ರತಿಯೊಬ್ಬರಿಗೂ ಅವರದೇ ಆದ ಕಸುಬು, ಉಪಕಸುಬುಗಳು ಇರುತ್ತವೆ. ಅದೇ ರೀತಿಯಲ್ಲಿ ಈ ಕೊರವರೂ ಸಹ ಹಲವಾರು ಕಸುಬು ಉಪ ಕಸುಬುಗಳನ್ನು ಅವಲಂಬಿಸಿ ಜೀವನ ಸಾಗಿಸುತ್ತಿದ್ದಾರೆ. ಹಾಗೆಯೇ ಕೊರವರಲ್ಲಿ ಪಂಗಡಗಳು ಉದ್ಯೋಗಾನುಸಾರವಾಗಿಯೇ ಹೆಸರು ಪಡೆದಿವೆ. ಕೊರಮರಲ್ಲಿ ಕಡಲ ತೀರದಿಂದ ಉಪ್ಪನ್ನು ತಂದು ಮಾರುವವರರನ್ನು ಉಪ್ಪು ಕೊರವರು ಎಂದು ಕರೆಯುವರು. ತುಬ್ಬ, ಥುಬ್ಬೆ ಅಥವಾ ವಬ್ಬಾ ಎಂಬ ಮತ್ತಿತರ ದೊಡ್ಡ ವರ್ಗದ ಕೊರವರು ಬಿದಿರು ಸಿಗುವ ಬೆಟ್ಟದ ಬುಡಗಳಿಗೆ ಮಾತ್ರ ತಮ್ಮ ಅಲೆದಾಟವನ್ನು ಸೀಮಿತಗೊಳಿಸಿಕೊಂಡರು, ಬಿದರಿನಿಂದ ಇವರು ಧಾನ್ಯ ಶೇಖರಿಸುವ ಬುಟ್ಟಿ, ಗೊಬ್ಬರ ಹೊರುವ ಬುಟ್ಟಿ ಮತ್ತು ವಿವಿಧ ಅಲಂಕಾರಿಕ ವಸ್ತುಗಳನ್ನು ತಯಾರಿಸುವರು. ಇವರನ್ನು ದಬ್ಬೆ ಅಥವಾ ಬಿದಿರು ಕೊರಚರೆಂದು ಕರೆಯುವರು. ಎತ್ತಿನ ಕೊರಚರು ಸಾಮಾನು ಸಾಗಿಸುವ ಉದ್ಯೋಗದಲ್ಲಿ ತೊಡಗಿದ್ದು ಕತ್ತೆಗಳಿಗಿಂತ ಎತ್ತನ್ನು ಹೆಚ್ಚು ಬಳಸುತ್ತಾರೆ. ಕುಂಚೀ ಕೊರವರು ನೇಕಾರರಿಗೆ ಬೇಕಾಗುವ ಕುಂಚಿ, ಒಕ್ಕಲಿಗರಿಗೆ ಬೇಕಾಗುವ ನೆಲುವು, ಬುಟ್ಟಿ, ಪೊರಕೆ, ಜಲ್ಲಿ, ಮೊದಲಾದವುಗಳನ್ನು ಈಚಲಕಡ್ಡಿ, ದಾಗಡಿಯ ಬಳ್ಳಿಗಳಿಂದ ಮಾಡಿ ಮಾರಾಟವನ್ನು ಮಾಡುತ್ತಾ ಜೀವನ ಸಾಗಿಸುತ್ತಾರೆ. ಸನಾದಿ ಕೊರವರು ಗ್ರಾಮವಾಸಿಗಳು, ಇವರು ಮದುವೆ ಮುಂಜಿ ಮುಂತಾದ ಶುಭಕಾರ್ಯಗಳಲ್ಲಿ ಬಜೆಂತ್ರಿ ಊದುವರು. ಪಾಮುಲಕೊರವರು ಆಂಧ್ರದಲ್ಲಿ ಹಾವಾಡಿಗ ವೃತ್ತಿಯನ್ನು ಅವಲಂಬಿಸಿದ್ದಾರೆ. ಬಲಿಜ ಕೊರವರು ಧಾರ್ಮಿಕ ಕಾರ್ಯಗಳಲ್ಲಿ ಗುಗ್ಗುಳಹಾಕಿ ಹಾಡುವ ಕೆಲಸ ಮಾಡುತ್ತಾರೆ.

ಮತ್ತೊಂದು ಮುಖ್ಯ ಕೊರವ ವರ್ಗವೆಂದರೆ, ಶುಂಬು ಅಥವಾ ಶುಂಬೆಲರದು. ಅವರು ಕಾಡಿನ ಮರಗಳಿಂದ ಬೇರನ್ನು ಸಂಗ್ರಹಿಸಿ, ಉದ್ದನೆಯ ಕುಚ್ಚಗಳನ್ನು ತಯಾರಿಸುವರು. ಇದನ್ನು ನೇಕಾರರು ಉಪಯೋಗಿಸುವರು. ಇಂಥ ವಸ್ತುಗಳನ್ನು ತಯಾರಿಸುವುದರಲ್ಲಿ ಕೊರವರು ಬಹುತೇಕವಾಗಿ ಏಕಸ್ವಾಮ್ಯವನ್ನು ಪಡೆದವರಿಗಿದ್ದಾರೆ.

ಹೆಂಗಸರು ಪಚ್ಚೆ ಹುಯ್ಯುವ ಕಸುಬಿನಿಂದ ಜೀವನಕ್ಕೆ ಬೇಕಾದ ದವಸಧಾನ್ಯ ಮುಂತಾದ ಪದಾರ್ಥಗಳನ್ನು ಗಳಿಸುತ್ತಾರೆ. ಇದರಿಂದಾಗಿ ಅವರಿಗೆ ಪಚ್ಚೆ ಕಟ್ಟಿ ಎಂಬ ಹೆಸರು ಬಂದಿದೆ. ಕೊರವ ಸ್ತ್ರೀಯರಲ್ಲಿ ಕೆಲವರು ಕಣಿ ಹೇಳುತ್ತಾರೆ. ಅವರನ್ನು ಕೊರವಂಜಿಗಳೆಂದು ಕರೆಯುವರು. ಕುಂಚಿ ಕೊರವರು ಬೇಟೆಯಾಡುವುದರಲ್ಲಿ ನಿಸ್ಸೀಮರು. ಬಲೆಹಾಕಿ ಜಿಂಕೆ, ಮೊಲ, ನರಿ, ಹಾಗೂ ಹಲವು ಬಗೆಯ ಪಕ್ಷಿಗಳನ್ನು ಚಾತುರ್ಯದಿಂದ ಹಿಡಿಯುವರು. ಇವರಲ್ಲಿ ಕೆಲವು ಕೊರವರು ಹಳ್ಳಿ ಹಳ್ಳಿಗಳ ಮೇಲೆ ಹೋಗಿ ಕೋತಿಯಾಟವನ್ನು ಆಡಿಸುತ್ತ ಭಿಕ್ಷೆ ಬೇಡುತ್ತಾ ಕೋತಿ ಕೊರಮರಾಗಿ ಜೀವನಸಾಗಿಸುತ್ತಾರೆ.

ಊರು ಕೊರವರು ಸಾಮಾನ್ಯವಾಗಿ ಈಗಾಗಲೇ ಅಲೆಮಾರಿ ಜೀವನಕ್ಕೆ ಕಡಿವಾಣ ಹಾಕಿದ್ದಾರೆ. ಹಳ್ಳಿಗಳಲ್ಲಿ ಇತರ ಸಮುದಾಯಗಳೊಂದಿಗೆ ಒಟ್ಟಾಗಿ ಸೇರಿ ವಾಸಿಸುತ್ತಿದ್ದು, ಎಲ್ಲರಂತೆ ಅವರ ಮಕ್ಕಳೂ ಸಹ ಸರ್ಕಾರಿ ಶಾಲೆಗೆ ಹೋಗಿ ಓದುವುದು, ಬರೆಯುವುದು ಮಾಡುತ್ತಿದ್ದಾರೆ. ಇವರಲ್ಲಿ ಕೆಲವರು ಪೇದೆಗಳಾಗಿ, ಜೈಲು ಪಾಲಕರಾಗಿ, ಮತ್ತಿತರ ಬೇರೆ ಬೇರೆ ಇಲಾಖೆಗಳಲ್ಲಿ ಕಾರ್ಯ ಪ್ರವೃತ್ತರಾಗಿ ನೇಮಕಗೊಂಡಿದ್ದಾರೆ. ಇವರುಗಳು ತಮ್ಮ ಮೂಲ ಸ್ವರೂಪವನ್ನು ಬಹುತೇಕ ಕಳೆದುಕೊಡಿದ್ದಾರೆ. ಇವರು ಉಡುಗೆ, ತೊಡುಗೆ ನಡವಳಿಕೆ ಮತ್ತು ಸಂಪ್ರದಾಯಗಳಲ್ಲಿ ರೈತರನ್ನು ಹೋಲುತ್ತಾರೆ.

ಕೊರಮ ಸಮುದಾಯಗಳು ತಲೆತಲಾಂತರಗಳಿಂದ ಅನುಸರಿಸಿಕೊಂಡು ಬರುತ್ತಿರುವ ವೃತ್ತಿಗಳ ಬಗೆಗೆ ಅಲ್ಲಲ್ಲಿ ಮಾಹಿತಿಗಳು ದೊರೆಯುತ್ತವೆ. ಅಂಧಾನು ಶ್ರದ್ಧೆಗಳಿಗೆ ಒಳಪಟ್ಟ ಕೊರಮರು ಅಲ್ಪ ತೃಪ್ತರು. ವೃತ್ತಿಯಲ್ಲಿ ಮೇಲು ಕೀಳೆಂಬುದಾಗಿ ಭಾವಿಸದೆ ಬದುಕಿನ ಭವಿಷ್ಯದ ಚಿಂತನೆ ಹಾಗೂ ಕನಸು ಕಾಣದೆ ಜೀವನ ಸಾಗಿಸಿ ಕೊಂಡು ಬರುತ್ತಿದ್ದಾರೆ. ತನ್ನ ಉದರ ಪೋಷಣೆಗಾಗಿ ಪ್ರತಿಯೊಬ್ಬನೂ ಒಂದಲ್ಲ ಒಂದು ಉದ್ಯೋಗವನ್ನು ಮಾಡುವುದು ಸ್ವಾಭಾವಿಕವೆ. ಅಂತೆಯೇ ಕೊರಮರೂ ಕೂಡ ತಾವು ಬೀಡುಬಿಟ್ಟ ಸ್ಥಳ ಸನ್ನಿವೇಶ, ಅಂತೆಯೇ ದೊರೆಯುತ್ತಿದ್ದ ಸುತ್ತಮುತ್ತಲಿನ ಕಚ್ಚಾವಸ್ತುಗಳನ್ನು ಅವಲಂಬಿಸಿ ತಮ್ಮ ಕಸುಬುಗಳನ್ನು ರೂಢಿಸಿಕೊಂಡಿದ್ದಾರೆ. ಇಲ್ಲಿ ತೋರಿಬರುವ ವೃತ್ತಿಗಳು ಆಯಾ ಕಾಲಕ್ಕೆ ಬದಲಾಗುತ್ತಾ ಬಂದಿವೆ.

ಉಪ್ಪು ಮಾರುವ ಕೊರಮರು ಕೋಲಾರ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಸಮುದ್ರ ತೀರದಿಂದ ಉಪ್ಪನ್ನು ತರದೇ ಇದ್ದರೂ ಅಲ್ಲಿಯೇ ಕೊಂಡು ಮಾರುತ್ತಾರೆ.

ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ವಾಲಗದ ಅಥವಾ ಊರ ಕೊರವರು ಕಂಡು ಬರುತ್ತಾರೆ. ಇವರು ಬಳಸುವ ವಾದನಕ್ಕೆ ಸನಾಯಿ ಎಂದು ಕರೆಯುತ್ತಾರೆ. ದೇವಸ್ಥಾನದಲ್ಲಿ ಪೂಜಾ ಸಮಯದಲ್ಲಿ, ಮದುವೆ, ಶುಭಕಾರ್ಯಗಳಲ್ಲಿ ವಾದ್ಯ ನುಡಿಸುತ್ತಾರೆ.

ಕುಂಚಿ ಕೊರವರು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಕಾಣಸಿಗುವುದಿಲ್ಲ. ಯಾವಾಗ ಲಾದರೊಮ್ಮೆ ವಲಸೆ ಬಂದಾಗ ನಚಿ ಹುಲ್ಲಿನ ಪೊರಕೆ, ನೆಲುವುಗಳನ್ನು ಮಾರಲು ಬರುತ್ತಾರೆ. ಇವರಲ್ಲಿ ಹೆಂಗಸರು ಕಣಿ ಹೇಳುವುದು ಕಂಡುಬರುತ್ತದೆ.

ತಿಪಟೂರು ತಾಲ್ಲೂಕು ಬಿದರೆಗುಡಿಯಲ್ಲಿ ಕುಕ್ಕೆ ಕೊರಮ ಅಥವಾ ದಬ್ಬೆ ಕೊರಮರು ಕಂಡುಬರುತ್ತಾರೆ. ಇಲ್ಲಿ ಎಲ್ಲರೂ ಸಾಮಾನ್ಯವಾಗಿ ಬಿದಿರು ಬುಟ್ಟಿಗಳನ್ನು ಮಾಡುವವರಾಗಿದ್ದಾರೆ.

ಜೀವನ ನಿರ್ವಹಣೆ

ಬುಟ್ಟಿ ಹೆಣೆದು ಗಳಿಸಿದ ಹಣವು ಅವರ ಜೀವನದ ಅಗತ್ಯ ವಸ್ತುಗಳಿಗೆ ಸಾಕಾಗುವು ದಿಲ್ಲ. ಇವರು ಹಬ್ಬ ಹರಿದಿನ, ಮದುವೆ, ತಿಥಿ ಮುಂತಾದ ಕಾರ್ಯಗಳಿಗೆ ಮೇಲ್ವರ್ಗದ ಸಮುದಾಯಗಳಿಂದ ಹಣವನ್ನು ಸಾಲವಾಗಿ ಪಡೆಯುವರು. ಬೆಟ್ಟದಿಂದ ಬಿದಿರು ತರುವುದು ಒಂದು ಪ್ರಯಾಸವೇ ಸರಿ. ದಾರಿಯಿಲ್ಲದ ದಟ್ಟವಾದ ಅರಣ್ಯಗಳಲ್ಲಿ ಗಿಡಗಂಟಿಗಳನ್ನು ಬಳಸಿ, ಸೊಂಟಕ್ಕೂ ಮೇಲೆ ಬೆಳೆದ ಹುಲ್ಲು ಕರಡಗಳನ್ನು ದಾಟುತ್ತಾ ಉಬ್ಬು ತಗ್ಗು ದಿಣ್ಣೆಗಳನ್ನು ಹತ್ತಿ ಬಿದಿರನ್ನು ಜಗ್ಗಿ ಹೊರಗೆಳೆಯುವುದು, ಕತ್ತರಿಸುವುದು ಹೆಣಭಾರವಾದ ಹೊರೆಯನ್ನು ತಲೆಗೇರಿಸಿ ತಾವು ನೆಲೆಸಿರುವ ಸ್ಥಳಕ್ಕೆ ಬಂದು ಸೇರುತ್ತಿದ್ದು ಸಂಜೆ. ಹಗಲೆಲ್ಲ ಶ್ರಮಿಸಿ ಜೀವನವನ್ನು ನಡೆಸಬೇಕಾಗಿತ್ತು.

ಕೊರಮ ಸಮುದಾಯವು ನಾಡಿನುದ್ದಗಲಕ್ಕೆ ಚದುರಿ ಹೋಗಿದೆ. ದಕ್ಷಿಣ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಈ ಜನ ತಮ್ಮ ಮೂಲ ಉದ್ಯೋಗಗಳೊಂದಿಗೆ ಮತ್ತು ಆಧುನಿಕತೆ ಗನುಗುಣವಾಗಿ ಅನೇಕ ರೀತಿಯ ವೃತ್ತಿಗಳನ್ನವಲಂಬಿಸಿ ಕುಟುಂಬ ನಿರ್ವಹಣೆ ಮಾಡುತ್ತಿದ್ದಾರೆ. ಕೆಲವು ಕಡೆ ಬುಟ್ಟಿ ಹೆಣೆಯುವುದು, ವಾದ್ಯ ನುಡಿಸುವುದು, ವ್ಯವಸಾಯ, ಕೃಷಿಕೂಲಿ, ವ್ಯವಸಾಯಕ್ಕೆ ಸಂಬಂಧಿಸಿದ ಸಲಕರಣೆಗಳು, ಪಾತ್ರೆಗಳನ್ನು ಮಾರುವುದು ಕೆಲವರ ಉದ್ಯೋಗವಾಗಿದೆ. ಬಿದರೇಗುಡಿ, ಸೋರಲಮಾವು, ಬಿಟ್ಟೀಹಳ್ಳಿ ಮುಂತಾದ ಕಡೆ ಇರುವ ಕೊರಮರು ಕಂಬಳಿ, ಜಮಖಾನೆ, ಬೆಡ್‌ಶೀಟ್‌ಗಳನ್ನು ಮಾರುತ್ತಾರೆ. ನೆಲವು ಬಳ್ಳಿ ಹೂಬಳ್ಳಿಗಳಿಂದ ವೈವಿಧ್ಯಮಯವಾದ ಬುಟ್ಟಿ, ಮರ, ಬೀಸಣಿಕೆ, ತೊಟ್ಟಿಲು ಗಳನ್ನು ಮಾಡುವುದು, ಹಂದಿ ಸಾಕಣೆಕೆ, ಕೊರವಂಜಿ ಹೇಳಿಕೆ, ಹಾವು ಆಡಿಸುವುದು, ಕೋತಿಯಾಡಿಸುವುದು ಹೀಗೆ ಮುಂತಾದ ಕಸುಬುಗಳಿಂದ ಕುಟುಂಬ ನಿರ್ವಹಣೆ ಸಾಗುತ್ತಿದೆ. ಆದರೆ ಈಗಲೂ ಇವರಲ್ಲಿ ಆರ್ಥಿಕ ಸ್ಥಿತಿಯಲ್ಲಿ ಅಂತಹ ಬದಲಾವಣೆ ಯಾಗಿಲ್ಲ. ಕುಲಕುಸುಬುಗಳಿಂದ ಹೊಟ್ಟೆ ತುಂಬದಾದಾಗ ಅಥವಾ ಕುಲಕಸುಬಿಗೆ ಬೇಕಾಗುವ ಕಚ್ಚಾವಸ್ತುಗಳ ಕೊರತೆಯುಂಟಾದಾಗ ತಮ್ಮ ಮೂಲ ವೃತ್ತಿಯನ್ನು ಬಿಟ್ಟು ಅನಿವಾರ್ಯವಾಗಿ ಬೇರೆ ಉದ್ಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ

ಕುಟುಂಬ ನಿರ್ವಹಣೆಯಲ್ಲಿ ಕೊರಮ ಮಹಿಳೆಯರ ಪಾತ್ರವು ಬಹುಪಾಲು ಹೆಚ್ಚಾಗಿರುತ್ತದೆ. ಸುಗ್ಗಿಯ ದಿನಗಳಲ್ಲಿ ಯಾವ ಯಾವ ಊರುಗಳಲ್ಲಿ ಯಾವ ಯಾವ ತಿಂಗಳುಗಳಲ್ಲಿ ಸುಗ್ಗಿಯಿದೆ, ಯಾವ ಕಾಲದಲ್ಲಿ ಯಾವ ಊರಿಗೆ ಹೋದರೆ ಹೆಚ್ಚು ವ್ಯಾಪಾರವಾಗುತ್ತದೆ ಎಂಬುದನ್ನು ಅರಿತಿರುವ ಇವರು ಬುಟ್ಟಿಗಳನ್ನು ಮಾಡಿ ಮಾರಾಟ ಮಾಡಿ ಹೊಟ್ಟೆಯನ್ನು ತುಂಬಿಸಿಕೊಳ್ಳುವರು.

ಹೆಚ್ಚಿನ ಕೊರಮರಿಗೆ ಯಾವುದೇ ಎತ್ತು, ದನ, ಭೂಮಿ ಇರುವುದಿಲ್ಲವಾಗಿದೆ. ಹುಲ್ಲಿನ ಗುಡಿಸಲುಗಳು ಇವರು ವಾಸಿಸುವ ಮನೆಗಳಾಗಿದ್ದು ಎರಡು ಕತ್ತೆಗಳನ್ನು ಹೊಡೆದುಕೊಂಡು ಮೂಲ ಕಸಬು ಮಾಡುವುದಕ್ಕೆ ಬನಕ್ಕೆ ಹೋಗಬೇಕಾದರೆ ಊರಿನ ಗೌಡ, ಕುಲಕರ್ಣಿಯವರಿಗೆ ಭೆಟ್ಟಿಯಾಗಿ ಅವರ ಅನುಮತಿಯಿಂದ ಬನಗಳಿಗೆ ಹೋಗಿ ಜಬರೆಯನ್ನು ತೆಗೆದುಕೊಂಡು ಬರುತ್ತಿದ್ದರು. ಒಂದೊಂದು ಸಲ ಕುಟುಂಬದಿಂದ ಮೂರು ನಾಲ್ಕು ದಿನಗಳವರೆಗೆ ಬನದಲ್ಲಿಯೇ ವಾಸ ಮಾಡಿ ಬನದಲ್ಲಿ ಜಬರೆಯನ್ನು ಕೊಯ್ಯುತ್ತಿದ್ದರು. ಹೋಗುವಾಗ ತಮಗೆ ಬೇಕಾಗುವ ಸಾಮಾನುಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದರು. ಮಳೆ, ಚಳಿಗೆ ಆಶ್ರಯವಾಗಿ ಕೌದಿಯನ್ನು ಗುಡಾರವಾಗಿ ಕಟ್ಟಿ ಅದರಲ್ಲಿ ವಾಸ ಮಾಡುತ್ತಿದದರು. ಜಬರಿಯನ್ನು ಕೊಯ್ದುಕೊಂಡು ಬಂದು ಮನೆಯಲ್ಲಿ ಹಾಕಿ ಅವರು ಊರಿನ ಗೌಡ, ಕುಲಕರ್ಣಿಯವರಿಗೆ ಹೋಗಿ ನಮಸ್ಕರಿಸಿ ಬನದಿಂದ ವಾಪಸಗಿರುವ ಬಗ್ಗೆ ವರದಿ ಒಪ್ಪಿಸಬೇಕಾಗಿತ್ತು. ಆದರೆ ಇತ್ತೀಚೆಗೆ ಈ ಪದ್ಧತಿ ಇಲ್ಲವಾಗುತ್ತಿದೆ. ಇಂದು ಕೊರಮರು ಬೇರೆ ಬೇರೆ ಕೆಲಸಗಳಲ್ಲಿ ತೊಡಗಿರುವುದನ್ನು ಕಾಣಬಹುದು. ಕೊರಮರಲ್ಲಿ ಕಾರ್ಯ ನಿರ್ವಹಿಸುವವರ ಸಂಖ್ಯೆ, ನಿರುದ್ಯೋಗಿಗಳ ಸಂಖ್ಯೆ ಮುಂತಾದವುಗಳು ಈ ಕೆಳಗಿನಂತಿದೆ.

**ಕೊರಮರಲ್ಲಿ ಆಶ್ರಿತರ ವಯೋಗುಂಪು**

ಸರ್ಕಾರವು ೦–೧೭ರ ವಯೋಮಾನದವರನ್ನು ನೇಮಕಾತಿಗೆ ಅನರ್ಹವೆಂದು ಭಾವಿಸುತ್ತದೆ. ಹಾಗೆ ೬೦ವರ್ಷಕ್ಕಿಂತ ಮೇಲ್ಪಟ್ಟವರು ಕೆಲಸ ಮಾಡಲು ಸಾಧ್ಯವಾಗದ ಅಸಾಹಯಕರೆಂದು ಪರಿಗಣಿಸಲಾಗುತ್ತದೆ. ಕೊರಮರಲ್ಲಿ ೦–೧೭ರೊಳಗಿನವರ ಪ್ರಮಾಣ ೪೪.೦೬ ಇದೆ.ಹಾಗೇ ೬೦ ವರ್ಷಕ್ಕಿಂತ ಮೇಲ್ಪಟ್ಟವರ ಪ್ರಮಾಣವು ೩.೬೨ ರಷ್ಟಿದೆ. ಅಂದರೆ ಕಾಯಕಾರ್ಹವಲ್ಲದ ಗುಂಪಿನ ಪ್ರಮಾಣವು ೪೭.೬೮ ಎಂದು ತಿಳಿದುಬರುತ್ತದೆ. ಇವರನ್ನು ಅವಲಂಬಿತ ಗುಂಪೆಂದು ಪರಿಗಣಿಸಲಾಗಿದೆ.

**ಕೋಷ್ಟಕ: ೭.೧ ಸಮೀಕ್ಷೆಗೊಳಪಟ್ಟ ಕೊರಮರಲ್ಲಿ ಆಶ್ರಿತರ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦–೧೭ ವಯಸ್ಸಿನ ಗುಂಪು | ೧೦೦೦ | ೮೭೩ | ೧೮೭೩ |
| ೬೧ ವರ್ಷ ಮೆಲ್ಪಟ್ಟವರ ಗುಂಪು | ೭೨ | ೮೨ | ೧೫೪ |

**ಕೊರಮರ ಕಾಯಕಾರ್ಹ ವಯೋಗುಂಪು**

೧೮–೬೦ರ ವಯೋಮಾನದೊಳಗಿನವರನ್ನು ಕಾಯಕಾರ್ಹ ಗುಂಪೆಂದು ಪರಿಗಣಿಸಲಾಗಿದೆ. ಅಂಥವರು ಕೊರಮರಲ್ಲಿ ೫೨.೩೨ರ ಪ್ರಮಾಣದಲ್ಲಿದ್ದಾರೆ. ಕಾಯಕಾರ್ಹರಲ್ಲಿ ಪುರುಷರು ೫೨.೧೩, ಹಾಗೂ ಮಹಿಳೆಯರು ೫೨.೫೨ರ ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ: ೭.೨ ಸಮೀಕ್ಷೆಗೊಳಪಟ್ಟ ಕೊರಮರ ಕಾಯಕಾರ್ಹ ವಯೋಗುಂಪು**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೧೮-೪೦ ವಯಸ್ಸಿನ ಗುಂಪು | ೮೮೦ | ೮೪೧ | ೧೭೨೧ |
| ೪೧-೬೦ ವಯಸ್ಸಿನ ಗುಂಪು | ೨೮೮ | ೨೧೬ | ೫೦೪ |

**ಕೊರಮರಲ್ಲಿ ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ**

ಕೊರಮ ಸಮುದಾಯದಲ್ಲಿ ೧೮ ರಿಂದ ೪೦ ವಯೋಗುಂಪಿನವರನ್ನು ವಿಶೇಷವಾಗಿ ಕಾಯಕರ್ಹ ಮತ್ತು ಪ್ರಜನನರ್ಹ ಗುಂಪೆಂದು ಪರಿಗಣಿಸಲಾಗಿದೆ. ಇವರಲ್ಲಿಯ ವಿವಿದ ವೃತ್ತಿಗಳನ್ನು ಅವಲಂಬಿಸಿರುವವರು ಹೀಗಿದ್ದಾರೆ. ಸರ್ಕಾರಿ ನೌಕರರು ೦.೮೫ ಇದ್ದಾರೆ. ಕೃಷಿಕರು ಅತ್ಯಂತ ಕಡಿಮೆ ಪ್ರಮಾಣದಲ್ಲಿ ೦.೧೩, ಮೀನುಗಾರರು ೧.೭೯ ವ್ಯಾಪರಸ್ತರು ೪.೧೩, ಧಾರ್ಮಿಕ ಬಿಕ್ಷಕರು ೦.೩೧, ಕಲಾವಿದರು ೧೩.೧೬, ಇತರೆ ಕೆಲಸಗಳಲ್ಲಿ ೫೬.೭೧ ರಷ್ಟು ಜನ ತೊಡಗಿರುವುದು ಕಂಡುಬರುತ್ತದೆ.

**ಕೋಷ್ಟಕ: ೭.೩ ಸಮೀಕ್ಷೆಗೊಳಪಟ್ಟ ಕೊರಮರ ವಿವಿಧ ಕೆಲಸಗಳಲ್ಲಿ ತೊಡಗಿಕೊಂಡವರ ಪ್ರಮಾಣ (೨೦೦೭)**

| ವಿವರ | ಪುರುಷ | ಸ್ತ್ರೀ | ಒಟ್ಟು |
|---|---|---|---|
| ಕೃಷಿಕರು | ೩ | ೦ | ೩ |
| ಕೃಷಿಕಾರ್ಮಿಕರು | ೬೭ | ೩೨ | ೯೯ |
| ಸರಕಾರಿ ನೌಕರರು | ೧೫ | ೪ | ೧೯ |
| ಮೀನುಗಾರರು | ೨೮ | ೧೨ | ೪೦ |
| ವ್ಯಾಪರಸ್ತರರು | ೪೫ | ೪೭ | ೯೨ |
| ಧಾರ್ಮಿಕ ಭಿಕ್ಷುಕರು | ೨ | ೫ | ೭ |
| ಕಲಾವಿದರು | ೨೯೨ | ೧ | ೨೯೩ |
| ಇತರೆ ಉದ್ಯೋಗಿಗಳು | ೪೩೬ | ೮೨೫ | ೧೨೬೨ |

**ಬೇಟೆ**

ಕೊರಮರು ಮೂಲತಃ ಮಾಂಸಾಹಾರಿಗಳು. ತಮ್ಮ ಕಸುಬಿಗಾಗಿ ಕಾಡಿನಲ್ಲಿ ಬಿದಿರು ಹಾಗೂ ಈಚಲಿಗಾಗಿ ಅಲೆಯುವವರಾಗಿದ್ದರಿಂದ ಬೇಟೆ ವೃತ್ತಿಯು ಇವರಿಗೆ ಸಹಜವಾಗಿ ಮೈಗೂಡಿದೆ. ಹೆಂಡ ಮಾಂಸಗಳೆಂದರೆ ಈ ಸಮುದಾಯಕ್ಕೆ ಪಂಚಪ್ರಾಣ.

ಕಾಡುಮೇಡುಗಳಲ್ಲಿ ಸಿಗುವಂತಹ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ತಿನ್ನುವುದು ಹಾಗೂ ಅವುಗಳನ್ನು ಬೇಟೆಯಾಡುವ ತಂತ್ರಗಳನ್ನು ಕರಗತ ಮಾಡಿಕೊಂಡವರಾಗಿದ್ದರು. ಹೆಚ್ಚಾಗಿ ಬೇಟೆಗಳಲ್ಲಿ ಚಿಪ್ಪಂದಿ, ಬೆಳ್ಳಿಲಿ, ಆಳಿಲು, ಮೊಲ, ತೋಡನ, ಜಿಂಕೆ,

ಮುಳ್ಳುಹಂದಿ, ಕಾಡುಹಂದಿ, ಕಾಡುಕುರಿ, ಉಡ, ಮುಂಗುಸಿ, ಕಡವೆ, ಹಾರುಬೆಕ್ಕು, ಮುಂತಾದ ಪ್ರಾಣಿಗಳಾದರೆ, ಪಕ್ಷಿಗಳಲ್ಲಿ ನವಿಲು, ನೀರ್ಕೋಳಿ, ಗೌಜಿಗನ ಹಕ್ಕಿ, ಕಾಡು ಕೋಳಿ, ಪಾರಿವಾಳ, ಲಗಡು, ಗೂಬೆ, ಗಿಳಿ, ಬುರಲೆ ಹಕ್ಕಿ, ಮರಕುಟಿಗ, ಬಾವುಲಿ, ಕೊಕ್ಕರೆ, ಗಿಡಗ ಹೀಗೆ ಇತರೆ ಅನೇಕ ವಿಧದ ಪಕ್ಷಿಗಳನ್ನು ಮತ್ತು ಆಮೆ, ಮೀನು, ಏಡಿ, ಮುಂತಾದ ಜಲಚರಗಳನ್ನು ಬೇಟೆಯಾಡುತ್ತಿದ್ದರು.

ಬೇಟೆಯಾಡಲು ವಿವಿಧ ಬಗೆಯ ಬಲೆಗಳು, ಬಿಲ್ಲು, ಕಣ್ಣಿ, ಜಿಗುರು, ಮುಕ್ಕೊಡು, ತಡಿಕೆ, ಮಿಡಿ, ಪಾಜಿ, ಬಲೆ, ಬರ್ಚಿ, ಕೊಡಲಿ ಮುಂತಾದ ಸಾಧನಗಳನ್ನು ಬಳಸುತ್ತಾರೆ. ಹಾಗೂ ಬೇಟೆನಾಯಿ, ಗೌಜಿಗನ ಹಕ್ಕಿಯನ್ನು ಪಳಗಿಸಿ ಬೇಟೆಯಾಡುವ ಸಂದರ್ಭಗಳಲ್ಲಿ ಅವುಗಳನ್ನು ಸಹ ಬಳಸಿಕೊಳ್ಳುವರು. ಮೇಲ್ಕಾಣಿಸಿ ಯಾವ ಬೇಟೆಯೂ ಹಣಕ್ಕಾಗಿ ಮಾರಾಟ ಮಾಡುವುದಿಲ್ಲ. ಆದರೆ ತಮಗೆ ಹೆಚ್ಚಿನ ಪ್ರಮಾಣದಲ್ಲಿ ಸಿಕ್ಕುವಂತಹ ಮೊಲ, ಕೌಜುಗಗಳನ್ನು ಹಣಕ್ಕೆ ಮಾರಿ ಜೀವನ ಸಾಗಿಸುತ್ತಾರೆ. ಇವೆಲ್ಲಾ ಹೊಟ್ಟೆ ಪಾಡಿಗಾಗಿ ಮಾಡುವ ಬೇಟೆಗಳಾಗಿರುತ್ತವೆ.

ಈ ಸಮುದಾಯವು ಬೇಟೆಗಾಗಿ ಹೋಗುವ ಸಂದರ್ಭಗಳಲ್ಲಿ ಅನ್ಯ ಸಮುದಾಯ ದವರನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುವುದಿಲ್ಲ.

ಪ್ರಸ್ತುತ ದಿನಗಳಲ್ಲಿ ಇವರು ಬೇಟೆಯಾಡುವುದು ಕಡಿಮೆಯಾಗುತ್ತಾ ಬಂದಿದೆ. ನಾಗರಿಕತೆ ಮುಂದುವರೆದಂತೆಲ್ಲ ಈ ಸಮುದಾಯದ ಜನರು ತಮ್ಮ ಮೂಲ ವೃತ್ತಿಗಳಿಂದ ದೂರಾವಾಗುತ್ತಿದ್ದಾರೆ. ಇಂದಿನ ಯುವ ಜನಾಂಗ ಮೊದಲಿನ ಹಾಗೆ ಪಕ್ಷಿ, ಪ್ರಾಣಿಗಳನ್ನು ಬೇಟೆಯಾಡುವುದು ನಾಚಿಕೆಯ ಸಂಗತಿ ಎಂದು ಭಾವಿಸುತ್ತವೆ. ಕೊರಮ ಸಮುದಾಯಗಳಿಗೆ ನೀಡಿರುವ ಸರ್ಕಾರದ ಯೋಜನೆಗಳು ಮತ್ತು ಅದರ ವೈಫಲ್ಯತೆಯ ಕಾರಣಗಳೇನಿದ್ದರೂ ಅವರ ಜೀವನ ಮಟ್ಟವನ್ನು ಸುಧಾರಿಸಲು ಮಾಡು ವಂಥ ಕಾರ್ಯಗಳು ವಿಫಲವಾಗುತ್ತಿವೆ. ಆದರೆ ಬೇಟೆ ಅವರ ಒಂದು ಕಾಲದ ಕಾಡಿನ ಜೀವನವನ್ನು ಪ್ರತಿನಿಧಿಸುವುದು ಕಂಡಬರುತ್ತದೆ.

ಬೇಟೆಗೆ ಬಳಸುವ ಉಪಕರಣಗಳು

**ಜಿಗುರು** : ಹಕ್ಕಿಗಳನ್ನು ಹಿಡಿಯಲು ಮಾತ್ರ ಇದನ್ನು ಉಪ ಯೋಗಿಸುತ್ತಾರೆ. ಜಿಗುರು (ಅಂಟನ್ನು) ಅರಳೀಮರದ ಹಾಲಿನಿಂದ ತಯಾರಿಸುತ್ತಾರೆ. ಶೇಖರಿಸಿದ ಹಾಲನ್ನು ಒಂದು ಮಡಕೆಯಲ್ಲಿ ಹದಕ್ಕೆ ತಕ್ಕಂತೆ ಕಾಯಿಸಿ ಬಿಸಿಯಿರುವಾಗಲೆ ಬಿದಿರಿನಿಂದ ಮಾಡಿದ ಕೊಳವೆಗೆ (ಚಿತ್ರದಲ್ಲಿ ತೋರಿಸಿರುವಂತೆ) ತುಂಬಿ ಇಟ್ಟುಕೊಳ್ಳುತ್ತಾರೆ. ಈ ಅಂಟು ಹೆಚ್ಚು ಶಕ್ತಿಯುತ್ತವಾಗಿದ್ದು ಈ ಅಂಟಿಗೆ ಒಮ್ಮೆ ತಗಲಿಕೊಂಡ ಹಕ್ಕಿ ಬಿಡಿಸಿಕೊಳ್ಳಲು ಸಾಧ್ಯವಿಲ್ಲ.

**ಮುಕ್ಕೊಡು** : ಹಕ್ಕಿಗಳನ್ನು ಹಿಡಿಯಲು ಜಿಗರು ಅಂಟೊಂದಿದ್ದರೆ ಸಾಲದು. ಜೊತೆಗೆ

ಬಿದಿರಿನಿಂದ ಮಾಡಿದ ಮುಕ್ಕೊಡು(ಕತ್ತರಿ ಕಡ್ಡಿ) ಬೇಕಾಗುತ್ತದೆ. ಎರಡು ವಿಧಗಳಲ್ಲಿ ಮುಕ್ಕೊಡನ್ನು ಮಾಡುತ್ತಾರೆ. ಅಂಚಿಕಡ್ಡಿ ಗಾತ್ರದ ಸುಮಾರು ೧೨ ರಿಂದ ೧೮ ಅಂಗುಲ ಉದ್ದದ ಬಿದಿರಿನ ಎರಡು ಕಡ್ಡಿಯನ್ನು ಎರೆದು ನುಣುಪು ಮಾಡಿ ಕಡ್ಡಿಗಳನ್ನು ಒಟ್ಟಿಗೆ ಸೇರಿಸಿ ನಡುವೆ ಕಟ್ಟಿ ಆ ಕಡ್ಡಿಯನ್ನು ಅಗಲಿಸಿ ಮಧ್ಯೆ ಆ ಎರಡು ಕಡ್ಡಿಯ



ನಾಲ್ಕು ತುಂದಿಗಳನ್ನು ನೆಲೆದ ಮೇಲೆ ಸಮನಾಗಿ ಕೂರುವಂತೆ ಬಗ್ಗಿಸಿ ಆ ತುದಿಗಳಿಗೆ ಅಂಟು ಹಚ್ಚುತ್ತಾರೆ. (ಚಿತ್ರದಲ್ಲಿರುವಂತೆ) ಈ ರೀತಿಯಾಗಿ ತಯಾರಿಸಿದ ಕತ್ತರಿ ಕಡ್ಡಿಯ ಮಧ್ಯಕ್ಕೆ ಒಂದು ಕುಂಬಾರ ಹುಳವನ್ನು ಕಟ್ಟಿ ಬೇಟೆಗೆ ಸಿದ್ಧಗೊಳಿಸುತ್ತಾರೆ.

ಕಣ್ಣಿ : ಕಣ್ಣಿ ಎಂದರೆ ಉರುಳು ಅಥವಾ ನೇಣು. ಕುದುರೆ ಬಾಲದ ಕೂದಲಿನಿಂದ ದಾರ ಹೊಸೆದು ಮಾಡಿರುತ್ತಾರೆ. ಈಗ ಕೆಲವರ ಹತ್ತಿರ ಹಕ್ಕಿಗಳನ್ನು ಹಿಡಿಯುವ ಕಣ್ಣಿಗಳು ಮಾತ್ರ ಕಾಣಸಿಗುತ್ತವೆ. ಅಂಚಿಕಡ್ಡಿ ಗಾತ್ರದ ಗೇಣುದ್ದದ ಕಡ್ಡಿಗಳಿಗೆ ಕಡ್ಡಿಗೊಂದರಂತೆ ಉರುಳನ್ನು ಕಟ್ಟಿ ಅವನ್ನು ಒಂದು ದಾರಕ್ಕೆ ಸಾಲಾಗಿ ಕಟ್ಟಿರುತ್ತಾರೆ. ಒಮ್ಮೆ ಕಣ್ಣಿಗೆ ಹಕ್ಕಿ ಸಿಕ್ಕಿಕೊಂಡರೆ ಬಿಡಿಸಿಕೊಳ್ಳುವುದು ಸುಲಭವಲ್ಲ.

ತಡಿಕೆ : ಈ ತಡಿಕೆಯನ್ನು ಸುಡ್ಲು ತಡಿಕೆ ಎಂದೂ ಕರೆಯುತ್ತಾರೆ. ಮಳೆಗಾಲದಲ್ಲಿ ವರ್ಷಕ್ಕೊಮ್ಮೆ ಮಾತ್ರ ಬಳಸುವ ಈ ಬೇಟೆ ಸಾಧನವನ್ನು ಬಿದಿರಿನ ತಡಿಕೆ ಮತ್ತು ಕುದುರೆ ಬಾಲದ ಜುಟ್ಟು ಅಥವಾ ದನದ ಬಾಲದ ಜುಟ್ಟಿನಿಂದ ತಯಾರಿಸುತ್ತಾರೆ.

ಪಾಚಿ : ಇದು ಕಣ್ಣಿಉಳ್ಳುಗಳನ್ನು ಬಂಧಿಸಿದ ಕಡ್ಡಿಗಳ ಕಟ್ಟಾಗಿದ್ದು ಇದನ್ನು ಬಿದರಿನ ಕಡ್ಡಿಯಿಂದ ಪಾಜಿಯ ಚೌಕಟ್ಟನ್ನು ತಯಾರಿಸಿಕೊಂಡು ಆ ಚೌಕಟ್ಟಿನೊಳಗೆ ನಾಲ್ಕು, ಐದು ಕಣ್ಣಿಗಳು ಕೂರುವಂತೆ ದಾರದಿಂದ ಮನೆಗಳನು ಕಟ್ಟಿ ಪ್ರತಿಯೊಂದು ಮನೆಗೂ ಕಣ್ಣಿಗಳನ್ನು ಬಂಧಿಸುತ್ತಾರೆ. ಇದು ಹಗುರವಾಗಿದ್ದು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆಗೆದುಕೊಂಡು ಹೋಗಬಹುದು. ಪಾಜಿಗೆ ಒಮ್ಮೆಲೆ ಹಲವು ಹಕ್ಕಿಗಳು ಬೀಳುವಂತೆ ಮಾಡುತ್ತಾರೆ.

ಬಿಲ್ಲು : ಪಕ್ಷಿಗಳನ್ನು, ಸಣ್ಣ ಪ್ರಾಣಿಗಳನ್ನು ಕೊಲ್ಲಲು ಬಿಲ್ಲನ್ನು ಉಪಯೋಗಿಸುವರು. ಮೆದುವಾದ ಬಿದಿರಿನ ದಬ್ಬೆಯಿಂದ ಬಿಲ್ಲನ್ನು ಮಾಡುತ್ತಾರೆ. ಕಲ್ಲನ್ನು ಇಟ್ಟು ಹೊಡೆಯಲು ಸಾಧ್ಯವಾಗುವಂತೆ ಅದನ್ನು ರಚಿಸುತ್ತಾರೆ.

ಮಿಡಿ : ಇದನ್ನು ಮಿಡಿ ಅಥವಾ ಸಿಡಿ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಬಿದಿರು ಮತ್ತು ಹಳೆಯ ಛತ್ರಿ ಕಡ್ಡಿಗಳಿಂದ ಮಿಡಿಯನ್ನು ತಯಾರಿಸಲಾಗುತ್ತದೆ. ಈ ಸಾಧನದಲ್ಲಿರುವ ಛತ್ರಿಕಡ್ಡಿಗೆ ಕುಂಬಾರ ಹುಳುವನ್ನು ಸಿಕ್ಕಿಸಿ ಪಕ್ಷಿಗಳನ್ನು ಹಿಡಿಯುತ್ತಾರೆ.

ಬಲೆ : ಇವರು ಬಳಸುವ ಬಲೆಗಳು ಅನೇಕ ರೀತಿಯಲ್ಲಿದ್ದು ಇಲಿಲು ಹಿಡಿಯುವ ಬಲೆ, ಮೊಲದ ಬಲೆ, ಹಂದಿ ಬಲೆ, ಮೀನಿನ ಬಲೆ, ಬಾವುಲಿಗಳನ್ನು ಹಿಡಿಯುವ ಬಲೆ ಹೀಗೆ ಅನೇಕ ವಿಧದಲ್ಲಿ ಬಲೆಗಳನ್ನು ಉಪಯೋಗಿಸುತ್ತಾರೆ.

### ಕೃಷಿ

ಕೆಲವು ಊರುಗಳಲ್ಲಿ ಊರ ದೇವಾಲಯಗಳಲ್ಲಿ ಊರಿನ ಜಾತ್ರೆ, ಉತ್ಸವ, ಹಬ್ಬ, ಶುಭಕಾರ್ಯಗಳಿಗೆ ವಾದ್ಯವನ್ನು ನುಡಿಸುವ ಕೊರಮರಿಗೆ ದೇವಾಸ್ಥಾನದ ಭೂಮಿಯನ್ನು ಉಂಬಳಿಯಾಗಿ ಬಿಟ್ಟು ಕೊಟ್ಟಿರುತ್ತಾರೆ. ಹೀಗಾಗಿ ಇವರು ವ್ಯವಸಾಯವನ್ನು ಅವಲಂಬಿಸಿದ್ದಾರೆ. ಪ್ರಸ್ತುತ ದಿನಗಳಲ್ಲಿ ಹಲವಾರು ಕುಟುಂಬಗಳು ವ್ಯವಸಾಯದಲ್ಲಿ ನೈಪುಣ್ಯತೆ ಪಡೆದುಕೊಂಡು ಮಿಕ್ಕೆಲ್ಲಾ ರೈತರಂತೆ ತಾವು ಸಹ ಬೆಳೆಯನ್ನು ತಾವೇ ಬೆಳೆದುಕೊಳ್ಳುತ್ತಾರೆ.

ಭೂರಹಿತ ಕುಟುಂಬಗಳು ತಾವು ನೆಲೆಯೂರಿದ ಸ್ಥಳಗಳ ಅಕ್ಕಪಕ್ಕದ ಹಳ್ಳಿಗಳಿಗೆ ದಿನಗೂಲಿಗಳಾಗಿ ಕೆಲಸಕ್ಕೆ ಹೋಗುತ್ತಾರೆ. ಈ ದಿನಗೂಲಿ ವರ್ಷದ ಎಲ್ಲಾ ತಿಂಗಳುಗಳಲ್ಲಿ ದೊರೆಯದಿರುವುದರಿಂದ ಉಳಿದ ಕಾಲದಲ್ಲಿ ಬುಟ್ಟಿ, ಚಾಪೆ ಹೆಣೆಯುವುದು ಕಂಡು ಬರುತ್ತದೆ. ಎರಡು ಕತ್ತೆಗಳನ್ನು ಹೊಡೆದುಕೊಂಡು ಮೂಲ ಕಸಬು ಮಾಡುವುದಕ್ಕೆ ಬನಕ್ಕೆ ಹೋಗಬೇಕಾದರೆ ಊರಿನ ಗೌಡ, ಕುಲಕರ್ಣಿಯವರಿಗೆ ಭೇಟ್ಟಿಯಾಗಿ ಅವರ ಅನುಮತಿಯಿಂದ ಬನಗಳಿಗೆ ಹೋಗಿ ಜಬರೆಯನ್ನು ತೆಗೆದುಕೊಂಡು ಬರುತ್ತಿದ್ದರು. ಒಂದೊಂದು ಸಲ ಕುಟುಂಬದಿಂದ ಮೂರು ನಾಲ್ಕು ದಿನಗಳವರೆಗೆ ಬನದಲ್ಲಿಯೇ ವಾಸ ಮಾಡಿ ಬನದಲ್ಲಿ ಜಬರೆಯನ್ನು ಕೊಯ್ಯುತ್ತಿದ್ದರು. ಹೋಗುವಾಗ ತಮಗೆ ಬೇಕಾಗುವ ಸಾಮಾನುಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದರು. ಮಳೆ, ಚಳಿಗೆ ಆಶ್ರಯವಾಗಿ ಕೌದಿಯನ್ನು ಗುಡಾರವಾಗಿ ಕಟ್ಟಿ ಅದರಲ್ಲಿ ವಾಸ ಮಾಡುತ್ತಿದದರು. ಜಬರಿಯನ್ನು ಕೊಯ್ದುಕೊಂಡು ಬಂದು ಮನೆಯಲ್ಲಿ ಹಾಕಿ ಅವರು ಊರಿನ ಗೌಡ, ಕುಲಕರ್ಣಿಯವರಿಗೆ ಹೋಗಿ ನಮಸ್ಕರಿಸಿ ಬನದಿಂದ ವಾಪಸಗಿರುವ ಬಗ್ಗೆ ವರದಿ ಒಪ್ಪಿಸಲಾಗುತ್ತಿತ್ತು. ಬನದಿಂದ ವಾಪಸಗಿರುವ ಇವರು ಗುಡಿಸಲಿನಲ್ಲಿ ಯಾವುದೇ ದವಸದಾನ್ಯಗಳು ಇರುವುದಿಲ್ಲ. ತಂದಿರುವ ಜಬರೆಯಿಂದ ಪೊರಕೆಯನ್ನು ತಯಾರಿಸಿ ಅವುಗಳನ್ನು ಊರಿನೊಳಗೆ ಹೋಗಿ ರೊಟ್ಟಿಗೆ ಒಂದು ಬಾರಿಗೆಯಂತೆ ಮಾರಾಟ ಮಾಡುತ್ತಿದ್ದರು.

### ಪಶುಪಾಲನೆ

ಕೊರಮ ಸಮುದಾಯದ ಮತ್ತೊಂದು ಪ್ರಮುಖ ಉಪಕಸುಬೆಂದರೆ ಹಂದಿ ಸಾಕಣೆಯಾಗಿದೆ. ಎತ್ತು, ಕತ್ತೆ ನಾಯಿಗಳಂತೆ ಈ ಸಮುದಾಯವು ಹಂದಿಗಳನ್ನು ಸಾಕುತ್ತಾರೆ. ಎತ್ತುಗಳನ್ನು ಭೂಮಿ ಉಳಲು, ಕತ್ತೆಯನ್ನು ಕಟ್ಟಿಗೆ ಹಾಗೂ ಬುಟ್ಟಿಗಳ ಸಾಗಾಣಿಕೆಗೆ ನಾಯಿಯನ್ನು ಬೇಟೆಯಾಡಲು ಸಾಕುತ್ತಾರೆ. ಆದರೆ ಇವರು ತಮ್ಮ ಹಟ್ಟಿಗಳ ಅಥವಾ ಗುಡಿಸಲುಗಳ ಪಕ್ಕದಲ್ಲೆ ಹಂದಿಗಳಿಗೆ ಪ್ರತ್ಯೇಕವಾಗಿ ಗುಡಿಸಲುಗಳನ್ನು ನಿರ್ಮಿಸಿ ಕೊಂಡಿರುತ್ತಾರೆ. ಹಂದಿಗಳನ್ನು ಕೆಲವು ಮುಖ್ಯ ಉದ್ದೇಶಗಳಿಗೆ ಸಾಕುವುದುಂಟು. ಕೊರಮ ಸಮುದಾಯದವರು ಕರಿ ಹಂದಿ, ಬಿಳಿ ಹಂದಿ ಎಂಬ ಎರಡು ತಳಿಯನ್ನು ಹೊಂದಿದ ಹಂದಿಗಳನ್ನು ಸಾಕಣಿಕೆ ಮಾಡುತ್ತಾರೆ. ಇವುಗಳ ಆಹಾರಕ್ಕಾಗಿ ಕಾಡಿಗೆ ಹೊಡೆದುಕೊಂಡು ಹೋಗಿ ಕತ್ತಾಳೆ ಗಿಣ್ಣನ್ನು ಕತ್ತರಿಸಿ ಹಾಕುತ್ತಾರೆ. ಹಾಗೆಯೇ

ಸುತ್ತಮುತ್ತಲ ಹಳ್ಳಿಗಳ ಮಲವೂ ಸಹ ಹಂದಿಗಳ ಆಹಾರವಾಗಿರುತ್ತದೆ. ಕರಿ ಹಂದಿಗಳನ್ನು ಮುಕ್ತವಾಗಿ ಹೊರ ಬಿಟ್ಟಿರುತ್ತಾರೆ. ಬಿಳಿ ಹಂದಿಗಳನ್ನು ಇತರೆ ದನಕರುಗಳನ್ನು ಮೇಯಿಸುವಂತೆ ಹೋಟೇಲುಗಳಲ್ಲಿ ದೊರೆಯುವ ಮುಸುರೆ ನೀರು ಅಳಿದುಳಿದ ತಿನಿಸುಗಳನ್ನು ಮೇಯಿಸುತ್ತಾರೆ. ಇದರಿಂದಾಗಿ ಕರಿ ಹಂದಿಗಳು ಬಡಕಲಾಗಿ ನೋಡಲು ಅಸಹ್ಯಕರವಾಗಿ ಕಾಣುತ್ತವೆ. ವಿಶೇಷವಾಗಿ ಪಾಲನೆ ಮಾಡಿದ ಹಂದಿಗಳು ಮಾಂಸ ದಂಗಡಿಗಳಿಗೆ ಮಾರಾಟ ಮಾಡುತ್ತಾರೆ. ಜೊತೆಗೆ ಅವುಗಳ ಗೊಬ್ಬರ ಸಂಗ್ರಹಿಸಿ ಕೃಷಿ ಭೂಒಡೆತನ ಹೊಂದಿದ ರೈತರಿಗೆ ಹಣಕ್ಕಾಗಿ ಮಾರುವುದಾಗಿದೆ. ಕರಿ ಹಂದಿಗಳನ್ನು, ಬಿಳಿ ಹಂದಿಗಳಿಗೆ ನೀಡುವ ಯಾವುದೇ ಉತ್ತಮ ಪೋಷಣೆಗಳು ಮಾಡದೇ ಯಾವುದೇ ಅನ್ನಸತ್ವ ಪದಾರ್ಥಗಳನ್ನು ಕೊಡುವುದಿಲ್ಲ. ಈ ಹಂದಿಗಳು ಮರಿಹಾಕಿದ ೧೮ ೨೦ರ ದಿನದೊಳಗೆ ಮಾರಾಟ ಮಾಡುತ್ತಾರೆ. ಹಾಗೆಯೇ ಹಂದಿಗಳನ್ನು ಆಹಾರವಾಗಿ ಮದುವೆ, ಶುಭಕಾರ್ಯ ಹಾಗೂ ಹಬ್ಬ, ಜಾತ್ರೆಗಳಲ್ಲಿ ಕೊಯ್ದು ತಿನ್ನುತ್ತಾರೆ.

**ಕೋಷ್ಟಕ: ೭.೩. ಸಮೀಕ್ಷೆಗೊಳಪಟ್ಟ ಕೊರಮ ಸಮುದಾಯದ ಪಶು ಸಂಪತ್ತು**

| | |
|---|---|
| ಎತ್ತು | ೪೦ |
| ಆಕಳು | ೭೦ |
| ಎಮ್ಮೆ | ೪೮ |
| ಕುರಿ | ೫೨೮ |
| ಮೇಕೆ | ೨೫೯ |
| ಕೋಳಿ | ೧೪೪೯ |
| ಹಂದಿ | ೫೦೨೪ |
| ಕೌಜುಗ | ೨೪ |
| ವನ್ಯಜೀವಿ | ೫೧ |

## ಆಹಾರ ಸಂಗ್ರಹಣೆ

ಕೊರಮ ಸಮುದಾಯದವರು ಕುರಿ, ಕೋಳಿ, ಹಂದಿಗಳ ಮಾಂಸ, ಮೀನು, ಬೇಟೆಯಾಡಿ ಬಂದಂತಹ ಜಿಂಕೆ, ಮೊಲಗಳ ಮಾಂಸವನ್ನು ಆಹಾರಕ್ಕೆ ಬಳಸುತ್ತಾರೆ. ಈ ಸಮುದಾಯದಲ್ಲಿ ಮಾಂಸಾಹಾರಿಗಳಷ್ಟೇ ಅಲ್ಲ ಸಸ್ಯಾಹಾರಿಗಳೂ ಕೂಡ ಬಳಕೆಯಲ್ಲಿದೆ. ದಿನವಿಡೀ ಅವಿಶ್ರಾಂತವಾಗಿ ದುಡಿಯುವ ಈ ಕೊರಮರು ಹೊಟ್ಟೆಗಾಗಿ ಮನೆಯಲ್ಲಿದುದ್ದನ್ನೇ ತಿಂದು ಹೊಟ್ಟೆಯನ್ನು ತುಂಬಿಸಿ ಕೊಳ್ಳುತ್ತಾರೆ. ಮೇಲೆ ತಿಳಿಸಿದ ಹಂದಿಸಾಕಣೆ, ಕೂಲಿ, ವ್ಯವಸಾಯ, ಬಿದಿರಿನ ಕೈಗಾರಿಕೆ, ಬೇಟೆ, ದಿನಗೂಲಿ ಹೀಗೇ ಮುಂತಾದ ವೃತ್ತಿ ಪ್ರವೃತ್ತಿಗಳಿಂದ ದುಡಿದರು ಸಹ ವರ್ಷದಲ್ಲಿ ಆರು ತಿಂಗಳು ಮೂರು ಹೊತ್ತು ತಿನ್ನಲು ಸಾಕಾಗುವಷ್ಟು ಆಹಾರ ಸಂಗ್ರಹಿಸಿಲಾಗುವುದಿಲ್ಲ. ಇದಕ್ಕೆ ಕಾರಣ ಇವರಿಗಿರುವ ಅಪಾರವಾದ ದುಶ್ಚಟಗಳಾದ ಕುಡಿತವಾಗಿದೆ. ಒಂದ್ಹೊತ್ತಿನ

ಊಟವಿಲ್ಲದಾಗ ಸೊಪ್ಪು, ಸದೆಯನ್ನು ತಿಂದು ಹಸಿವಿನಿಂದಲೂ ನರಳುತ್ತಾರೆ. ಇದು ನಿರಂತರವಾಗಿ ಜೀವನದುದ್ದಕ್ಕೂ ನಡೆದುಕೊಂಡು ಬಂದಿರುವುದಾಗಿದೆ. ಇವರಲ್ಲಿ ಬಹುತೇಕವಾಗಿ ಕಂಠಪೂರ್ತಿ ಕುಡಿಯುವುದು, ಬೀಡಿ ಸೇದುವುದು, ಎಲೆ ಅಡಿಕೆ, ಹೊಗೆಸೊಪ್ಪು, ಹೀಗೆ ಅನೇಕ ಬಗೆಯ ಅಭ್ಯಾಸಗಳು ಇವರ ದುಡಿಮೆಯ ಬಹುಪಾಲು ಹಣವನ್ನು, ಇದಕ್ಕಾಗಿ ವಿನಿಯೋಗಿಸಲಾಗುತ್ತದೆ.

# ೮

## ಸಾಹಿತ್ಯ ಮತ್ತು ಭಾಷೆ

**ಕೊ**ರಮರು ತಮ್ಮ ಜಾತಿಯ ಹುಟ್ಟಿನ ಬಗೆಗೆ, ದೇವತೆಗಳ ಬಗೆಗೆ ಹತ್ತು ಹಲವು ಕತೆ, ಐತಿಹ್ಯಗಳನ್ನು ಹೇಳುತ್ತಾರೆ. ಹಾಗೆ ಮದುವೆ, ಹುಟ್ಟು, ಮೈನೆರೆದಾಗ ಮುಂತಾದ ಸಂದರ್ಭಗಳಲ್ಲಿ ಹಾಡುಗಳನ್ನು ಹೇಳುವುದನ್ನು ಕಾಣಬಹುದು. ಅದ ರೊಂದಿಗೆ ಒಡಪು, ಗಾದೆಗಳನ್ನು ಹೇಳುವ ಮೂಲಕ ತಮ್ಮ ಬುದ್ಧಿವಂತಿಕೆ ವ್ಯಕ್ತಪಡಿಸು ವುದುಂಟು, ಕೊರಮರು ಜಬರಿಗೆ ಹೋದಾಗ ತಮ್ಮ ಬೇಸರವನ್ನು ಕಳೆಯಲು ಹಾಡು, ಕತೆಗಳಲ್ಲಿ ತೊಡಗುತ್ತಾರೆ. ಕೊರಮರಲ್ಲಿ ಪ್ರಚಲಿತವಿರುವ ಜನಪದ ಸಾಹಿತ್ಯದ ಅವಲೋಕವನ್ನು ಇಲ್ಲಿ ಮಾಡಲಾಗಿದೆ.

ಐತಿಹ್ಯ ೧: ಬ್ರಹ್ಮದೇವನಿಂದ ನೇರವಾಗಿ ಭೂಮಿಗೆ ಇಳಿದು ಬಂದವನು ಅಗ್ನೇಶ್ವಹು ವಿನ ಮಗ. ಅವನ ಹೆಸರು ವೇಣುಡು ಎಂಬುದಾಗಿತ್ತು. ಅವನು ಸಿಂಹಾಸನವನ್ನೇರಿ ಭೂಮಂಡಲವನ್ನು ಆಳ್ವಿಕೆ ಮಾಡುತ್ತಿದ್ದ. ಬಹಳ ವರ್ಷಗಳ ಕಾಲ ವೈಭವೋಪೇತವಾಗಿ ಆಡಳಿತ ನಡೆಸಿದ ವೇಣುಡು ಒಂದು ದಿನ ಸತ್ತು ಹೋದ. ಅವನಿಗೆ ಮಕ್ಕಳ ಭಾಗ್ಯ ವಿಲ್ಲದೇ ಸತ್ತು ಹೋದ್ದರಿಂದ ಈ ಸಿಂಹಾಸಸನಕ್ಕೆ ಉತ್ತರಾಧಿಕಾರಿ ಯಾರು ಎಂಬ ಸಂದಿಗ್ಧದ ಪ್ರಶ್ನೆ ಉದ್ಭವವಾಯಿತು. ಈ ಜಟಿಲ ಸಮಸ್ಯೆಯನನು ಬಗೆಹರಿಸುವಲ್ಲಿ ಯಾರೂ ಸಮರ್ಥರಾಗದೆ ಹೋದಾಗ ದಿಕ್ಕು ತೋಚದಂತಾದ ಪ್ರಜೆಗಳು ವೇಣುಡುವಿನ ದೇಹವನ್ನು ಮಣ್ಣಿಗೆ ಹೂಳಲೂ ಇಲ್ಲ, ಬೆಂಕಿಯಿಂದ ಸುಡಲೂ ಇಲ್ಲ, ಸ್ವಲ್ಪ ಕಾಲ ಅವನ ದೇಹವನ್ನು ಹಾಗೆಯೇ ರಕ್ಷಿಸಿ ಇಟ್ಟರು.

ಕೆಲ ಕಾಲಾನಂತರ ಈ ರೀತಿ ಭೂಲೋಕದಲ್ಲಿ ಉದ್ಭವಿಸಿರುವ ಸಮಸ್ಯೆಯನ್ನು ಬಗೆಹರಿಸುವ ಸಲುವಾಗಿ ಏಳು ಗ್ರಹಗಳು ಏಕಾಂತವಾಗಿ ಸಭೆ ಸೇರಿದವು. ಈ ಸಭೆ ಯಲ್ಲಿ ಮುಂದೇನು ಮಾಡಬಹುದು ಎಂಬ ವಿಷಯದ ಬಗ್ಗೆ ಸುದೀರ್ಘವಾದ ಚರ್ಚೆ ಹಾಗೂ ಆಲೋಚನೆಗಳು ನಡೆದವು. ನಂತರ ಕಡೆಯದಾಗಿ ಆ ಏಳು ಗ್ರಹಗಳು ಒಟ್ಟಾಗಿ ಸೇರಿಕೊಂಡು ಸತ್ತ ವೇಣುಡುವಿನ ಬಲತೊಡೆಯಿಂದ ಒಂದು ಜೀವಿಯನ್ನು ಸೃಷ್ಟಿಸಿದರು. ಆದರೆ ಅವರೆಷ್ಟೇ ಕೂಲಂಕುಷವಾಗಿ ಚರ್ಚಿಸಿ ಜಾಗರೂ ಕತೆಯಿಂದ ಮಾಡಿದರೂ ಅವರ ಈ ಕೆಲಸ ಯಶಸ್ವಿಯಾಗಲಿಲ್ಲ. ಏಕೆಂದರೆ

ವೇಣುಡುವಿನ ಬಲತೊಡೆಯಿಂದ ಸೃಷ್ಟಿಯಾದ ಜೀವಿಯ ದೇಹ ನಿರೂಪ ವಾಗಿದ್ದುದಲ್ಲದೆ, ಅವನ ಮುಖವೂ ಸಹ ಅತ್ಯಂತ ವಿಕಾರವಾಗಿತ್ತು. ಆದ್ದರಿಂದಾಗಿ ಅವನು ಸಿಂಹಾಸನದಲ್ಲಿ ಕೂರಲು ಭೂಮಂಡಲದ ಅಧಿಪತಿಯಾಗಲು ಯೋಗ್ಯನಲ್ಲ ಎಂದು ತೀರ್ಮಾನಿಸಿದರು.

ಆಗ ಆ ಏಳು ಗ್ರಹಗಳೂ ಮತ್ತೆ ಸಭೆ ಸೇರಿ ಅದೇ ವಿಷಯದ ಬಗ್ಗೆ ಚರ್ಚೆ ನಡೆಸಿದವು. ಕೊನೆಯದಾಗಿ ಆ ಏಳು ಗ್ರಹಗಳಲ್ಲಿ ಒಂದು ಮುಖ್ಯ ಗ್ರಹದ ಸಲಹೆಯ ಪ್ರಕಾರ ಮತ್ತೇ ವೇಣುಡುವಿನ ಬಲ ತೋಳಿನಿಂದ ಮತ್ತಬ್ಬನನ್ನು ಅದೇ ಪ್ರಕಾರ ಸೃಷ್ಟಿಸಿದರು. ಈ ಬಾರಿ ಜನಿಸಿದವನು ಮೊದಲಿನಂತಿರದೆ ತುಂಬಾ ಯೋಗ್ಯನೂ, ತೇಜಸ್ವಿಯೂ, ಸ್ಫುರದ್ರೂಪಿಯೂ ಆದವನಾಗಿದ್ದನು. ಇವನನ್ನು ನೋಡಿದ ಗ್ರಹಗಳು ಬಹಳ ಸಂತೋಷಗೊಂಡು ಪೃಥು ಚಕ್ರವರ್ತಿ ಎಂದು ನಾಮಕರಣ ಮಾಡಿ ಸಿಂಹಾಸನ ದಲ್ಲಿ ಕುಳ್ಳಿರಿಸಿದರು.

ಆದರೆ ಮೊದಲನೇ ಸಂತತಿಯಾದ ನಿಶದು ಎಂಬುವವನು ಈ ರೀತಿ ದಿಢೀರ್ ಬದಲಾದ ನಾಟಕೀಯ ಸನ್ನಿವೇಶದಿಂದಾಗಿ ಬಹಳಷ್ಟು ನಿರಾಶೆಗೊಂಡನು. ಈ ರೀತಿ ನಿರಾಶೆಗೊಳಗಾದ ನಿಶಡುವು ಸುಮ್ಮನೆ ಕೂರದೆ ತಾನು ರಾಜನಾಗದೆ ಹೋದರೆ ತನ್ನ ಸೃಷ್ಟಿಯಾದರೂ ಏತಕ್ಕಾಯಿತು ಎಂದು ದೇವರನ್ನು ಕಾಡಿ ಬೇಡಿ ಕೇಳಿಕೊಂಡನು. ಆಗ ನ್ಯಾಯ ಬದ್ಧವಾಗಿದ್ದ ಆ ನಿಶಡುವಿನ ಮನವಿಗೆ ಓಗೊಟ್ಟು ದೇವರು ಪೃಥು ಚಕ್ರವರ್ತಿಯು ಈ ಭೂಮಿಯ ರಾಜನಾಗಿರುವುದರಿಂದ ಈಗ ನಿನ್ನನ್ನು ಸಿಂಹಾಸನದಲ್ಲಿ ಕುಳ್ಳಿರಿಸಲು ಸಾಧ್ಯವಿಲ್ಲ. ಕಾರಣ ಊರನ್ನು ಆಳುವ ಬದಲು ನೀನು ಕಾಡನ್ನು ಆಳಬಹುದು ಎಂಬುದಾಗಿ ಆಜ್ಞಾಪಿಸಿದನು. ಅಂದಿನಿಂದ ನಿಶಡುವು ಕಾಡಿಗೆ ರಾಜನಾದ. ಅವನಿಗೆ ಬೋಯಾ, ಚೆಂಚು, ಯಾನಾಡಿ ಮತ್ತು ಕೊರವ ಎಂಬ ಮಕ್ಕಳು ಹುಟ್ಟಿದರು. ಇವರುಗಳಲ್ಲಿ ಬೋಯರು ಮಾತ್ರವೇ ಆ ನಿಶಡುವಿನ ನ್ಯಾಯದ್ಧವಾದ ಮಕ್ಕಳು. ಉಳಿದ ಚೆಂಚು, ಯಾನಾಡಿ ಮತ್ತು ಕೊರವರು ಧರ್ಮಬಾಹಿರವಾಗಿ ಹುಟ್ಟಿದರು. ಈ ಕಾರಣದಿಂದಾಗಿ ಇವರುಗಳಿಗೆ ತಮ್ಮ ನಿಜವಾದ ಸೃಷ್ಟಿಕರ್ತರು ಯಾರು ಎಂಬ ಚಿಂತೆ ಹತ್ತಿತ್ತು. ಈ ರೀತಿಯಾಗಿ ತಮ್ಮ ಸೃಷ್ಟಿಕರ್ತರನ್ನು ತಿಳಿಯುವ ಸಲುವಾಗಿ ಶಾಂತಚಿತ್ತರಾಗಿ ಕಾಯುತ್ತಿದ್ದುದರ ಪರಿಣಾಮವಾಗಿ ಅವರು ತಮ್ಮನ್ನು ತಾವೇ ಯರುಕಳ ಎಂದು ಕರೆದುಕೊಂಡರು. ಈ ಕಾರಣದಿಂದಾಗಿ ಇವರು ಯರಕಳರೆಂದೇ ಬೆಳಕಿಗೆ ಬಂದರು.

ಐತಿಹ್ಯ ೨: ಕೌರವ ಪಾಂಡವರ ನಡುವೆ ವೈಮನಸ್ಯ, ದ್ವೇಷ ಹಾಗೂ ಅವರಿಬ್ಬರ ನಡುವೆ ನಡೆದ ಯುದ್ಧವೇ ಮಹಾಭಾರತ ಕಥೆಯ ತಿರುಳು. ಬಾಲ್ಯದಿಂದಲೂ ಬದ್ಧದ್ವೇಷಿಗಳಾದ ಈ ಕೌರವ ಪಾಂಡವರು ವಯಸ್ಕರಾದಂತೆಲ್ಲಾ ಅವರಿಬ್ಬರ ನಡುವಣ ದ್ವೇಷವೂ ವೃದ್ಧಿಸತೊಡಗಿತು. ದಿನೇ ದಿನೇ ಮಿತಿಮೀರತೊಡಗಿದ ದುರ್ಯೋಧನನ ಅತಿಯಾದ ದುರ್ಬುದ್ಧಿಯಿಂದ ಬೇಸತ್ತು ಹೋದ ರಾಜಕುಮಾರ ಧರ್ಮರಾಜನು

ದುರ್ಯೋಧನನ ಮುಖವನ್ನು ಸಹ ನೋಡಬಾರದೆಂಬ ಉದ್ದೇಶದಿಂದ ರಾಜ್ಯವನ್ನು ತೊರೆದು ಒಮ್ಮೆ ದೇಶಾಂತರ ಹೊರಟು ಹೋಗುತ್ತಾನೆ. ಆದರೆ ಧರ್ಮರಾಜನನ್ನು ಒಬ್ಬ ಹುಡುಗಿ ಬಹಳ ಗಾಢವಾಗಿ ಪ್ರೀತಿಸಿರುತ್ತಾಳೆ. ಧರ್ಮರಾಜ ಹೊರಟು ಹೋಗುವಾಗ ಅವಳನ್ನು ಸಹ ಮರೆತಿರುತ್ತಾನೆ. ಆದರೆ ಆ ಹುಡುಗಿ ಮಾತ್ರ ಅವನನ್ನು ಮರೆತಿರುವುದಿಲ್ಲ. ಧರ್ಮರಾಜ ಊರು ಬಿಟ್ಟು ಹೊರಟು ಹೋದ ಎಂಬ ಸುದ್ದಿ ಕಿವಿಗೆ ಬೀಳುತ್ತಿದ್ದಂತೆಯೇ ದಿಗ್ಭ್ರಾಂತಳಾಗುತ್ತಾಳೆ. ರಾಜಕುಮಾರನನ್ನು ಸಂಪೂರ್ಣವಾಗಿ ಮರೆಯಲೂ ಆಗದೇ ಸೇರಿಕೊಳ್ಳಲೂ ಆಗದೆ ತೊಳಲಾಟಕ್ಕೆ ಸಿಲುಕಿಕೊಳ್ಳುತ್ತಾಳೆ. ಕೊನೆಗೆ ಒಂದು ದಿನ ಅವಳು ಮನೆಬಿಟ್ಟು ಹೊರಟು ಹೋಗುತ್ತಾಳೆ. ಗೊತ್ತುಗುರಿಯಿಲ್ಲದ ಆ ಹುಡುಗಿ ಅಪರಿಚಿತ ಸ್ಥಳಗಳಲ್ಲಿ ಅಪರಿಚಿತ ಜನರ ನಡುವೆ ವ್ಯವಹರಿಸಲು ಭಯಗ್ರಸ್ಥಳಾಗುತ್ತಾಳೆ. ಆಗ ಅವಳಿಗೊಂದು ಉಪಾಯ ಹೊಳೆಯುತ್ತದೆ. ಆ ಪ್ರಕಾರ ಭವಿಷ್ಯ ನುಡಿಯುವವಳಂತೆ ವೇಷ ಹಾಕಿಕೊಂಡು ಊರೂರು, ಬೀದಿ ಬೀದಿ ಅಲೆಯುತ್ತಾ ರಾಜಕುಮಾರ ಧರ್ಮರಾಜನನ್ನು ಹುಡುಕುತ್ತಾಳೆ. ಕೊನೆಗೊಂದು ದಿನ ತನ್ನ ಪ್ರಯತ್ನದಲ್ಲಿ ಯಶಸ್ವಿಯೂ ಆಗುತ್ತಾಳೆ. ಅಂದರೆ ಧರ್ಮರಾಜನನ್ನು ಪತ್ತೆ ಹಚ್ಚಿ ಅವಳು ಅವನ ಜೊತೆಗೆ ಸೇರಿಕೊಳ್ಳುತ್ತಾಳೆ. ಆಗ ಗರ್ಭಿಣಿಯಾಗುತ್ತಾಳೆ. ಹೀಗೆ ಈ ಸಂದರ್ಭದಲ್ಲಿ ಇವರಿಬ್ಬರಿಗೆ ಹುಟ್ಟಿದ ಸಂತಾನವೇ ಕೊರವ ಎಂಬ ಹೆಸರನ್ನು ಪಡೆಯಿತು.

ಐತಿಹ್ಯ ೩: ಯಾವುದೋ ಒಂದು ಸಂದರ್ಭದಲ್ಲಿ ಒಮ್ಮೆ ಪಾರ್ವತಿದೇವಿಯು ಕೊರವಂಜಿಯ ವೇಷಧರಿಸಿ ಶಿವನಿಗೆ ಭವಿಷ್ಯ ಹೇಳಿದಳಂತೆ. ಕೊರಮರು ಪಾರ್ವತಿಯ ಮಕ್ಕಳಾದ್ದರಿಂದ ಅಂದಿನಿಂದ ಇವರಿಗೆ ಕೊರವರು, ಕೊರವಂಜಿಗಳು ಎಂಬ ಹೆಸರು ಬಂದಿತಂತೆ.

ಐತಿಹ್ಯ ೪: ಒಮ್ಮೆ ಪಾರ್ವತಿ ದೇವಿಯು ಸರ್ಪವನ್ನು ಹಿಡಿದುಕೊಂಡು ಸೀಳುತ್ತಾಳೆ. ಅದರ ಹೊಟ್ಟೆಯಲ್ಲಿ ವಜ್ರವೈಢೂರ್ಯಗಳನ್ನು ತುಂಬುತ್ತಾಳೆ. ಅದನ್ನು ತನ್ನ ಮಗುವೆಂದು ಭಾವಿಸಿಕೊಂಡು ಅದಕ್ಕೊಂದು ತೊಟ್ಟಿಲನ್ನು ಮಾಡಿ ಕೊಡುವಂತೆ ಮೇದರವನೊಬ್ಬನಿಗೆ ಹೇಳುತ್ತಾಳೆ. ಸರ್ಪವನ್ನುಕಂಡು ಭಯಗ್ರಸ್ಥನಾದ ಮೇದರವನು ತೊಟ್ಟಿಲು ಮಾಡಿ ಕೊಡಲು ಒಪ್ಪುವುದಿಲ್ಲ. ಆದರೆ ಅದೇ ಮಾತನ್ನು ಪಾರ್ವತಿದೇವಿಯು ಕೊರಚನೊಬ್ಬನಿಗೆ ಹೇಳುತ್ತಾಳೆ. ಆಗ ಆ ಕೊರಚನು ಅವಳು ಕೇಳಿದಾಕ್ಷಣ ಎರಡೆಣಿಸದೆ ಒಂದು ಸುಂದರವಾದ ತೊಟ್ಟಿಲನ್ನು ಮಾಡಿಕೊಡುತ್ತಾನೆ. ಮೇದರವನು ನಿರಾಕರಿಸಿದ್ದನ್ನು ಕೊರಚನು ಶಿರಸಾವಹಿಸಿ ಮಾಡಿಕೊಟ್ಟಿದ್ದರಿಂದ ಪಾರ್ವತಿದೇವಿಯು ಬಹಳ ಸಂತುಷ್ಟಳಾಗುತ್ತಾಳೆ. ಆಗ ಕೊರಚರವನಿಗೆ ತನ್ನಲ್ಲಿದ್ದ ಮಂತ್ರದಂಡವನ್ನು ಕೊರವಂಜಿ ಕುಕ್ಕೆ ಮತ್ತು ಕೇರುವ ಮೊರವನ್ನು ಬಹುಮಾನವಾಗಿ ಕೊಟ್ಟು ಭವಿಷ್ಯ ಹೇಳುವ ಅಧಿಕಾರವನ್ನು ಅನುಗ್ರಹಿಸುತ್ತಾಳೆ. ಅಂದಿನಿಂದ ಈ ಕೊರವರಲ್ಲಿ ಕೊರವಂಜಿ ಸಂತತಿ ಬೆಳೆಯಿತು ಹಾಗೂ ಭವಿಷ್ಯ ನುಡಿಯುವ ಕಲೆ ದೈವದತ್ತವಾಗಿ ಒಲಿಯಿತಂತೆ.

## ಕಥೆಗಳು

### ಓತಿಕ್ಯಾತನ ಕಥೆ

ಒಂದು ಓತಿಕಾತು. ಆ ಓತಿಕಾತ್ನುಕು ನಾಲೇರ ಪಂಡಮಾರು. ಆ ನಾಲೇರ ಪಂಡ್ಮಾರ್ ಯಾರ್ಯಾರ್ ಅಂಡಿಕೆ ಇಲ್ಲಿ, ಒಂಗಕ್ಕು, ನಂಡು, ಪೂನ. ಒಂಡ್ನಾಳ್ ಓತಿಕಾತು ಓಹಗೂರ್ ಗವುಡ್ಲೆ ಅಸಗಂಡೋಗಿ ಕಲ್ ಕಟ್ಟಿಮೇನಿ ವುಕ್ಕಂಡ್ ಪಂಚಾಯ್ತಿಸೇಯ್ತಾ ಇಂದು ಪೇಟು ರುಮಾಲು ಸುತ್ಗಂಡು. ಅಪ್ಪದು ಇಲಿ ಸಾಸ್ತೆತ್ರಂಡ ಬುಟ್ಟಿ ಸಮುದ್ಗಂಡು, ಜಡಿ ಒಡ್ಗಂಡು, ಸಣ್ಣಿನಾಮ್ತ ಇಟ್ಗಂಡು ಸಂತ್ಗೋಗ್ರಿಕ್ ವಂದ ಅಂಗ್ಯಾಸಿ. ಅಪ್ಪದು ಓತಿಕಾತು ಅಕ್ಕರ್‌ತ್ಗು ಎಂಕೊಕ್ತ ಅಂಡು ಕೋಟು. ಅಗಅವ ನಿಮ್ಮ ಬಿರಕ ವಡಮಕ, ನಿಮ್ಮ ಬೀಟ ವಡಮಕು ಎಸರುಳ್ ಪ್ಯಾಟ್ಲಿ ಅಣ್ಣಿ ಅತ್ತೆರಕೊಕ್ರೆ. ನಿಮ್ಮ ವಡಮಕ ಸವರುಕ್ಕು ಅಂಡ. ಅಪ್ಪದು ಆ ಓತಿಕಾತು ಇಂತ ವಾತ ಅಂಡಳೆ ನನ್ನ ಮರ್ಯಾದೆಲ್ಲ ಓಸೆ ಅಂಡು ಅದ್ದಿಂದ್ ಓಯೋಟು ಪೂನಿಟೂಟ್ಗು. ಅಪ್ಪದು ತನ್ನಿ ಕಾಸಂಗೋ ವಡಮ ಕವ್ವರ್ಕು ಅಂಡಪೂನಿ. ನಿಮ್ಮ ಅಣ್ಣಿಯಾರಕ್ಟೇಕು, ನಿಮ್ಮ ತನ್ನಿ ಯಾರಕ್ಟೇಕು ನಾಕ್ ಮಾಣ ಅಂಡು ಎಂತ್ಗ ಇತ್ನಿ ಬೇಜಾರಾಗಿಗರಯೇ ಅಂಡು ಕೋಟ್ಕ. ನಾನು ಓಹಗೋರ್ ಗೌಡ್ಲ ಉಪ್ಟಿಚಗಂಡು ಪಂಚಾಯ್ತಿಸೇಯ್ತಾ ಇಂದೆ. ಅವ ಸಂತಗೋರ್‍ಕವಂದ ನಮ್ಮ ಮರ್ಯಾದ ಕಳಜ ಇಲ್ಲ ಅಂಡು. ಆತ್ಗಪೂನಿ ಅವ ಅಂಗ್ರವಳೆ ಅವ ಕಂಡಗ್ರ ಟೂಟ್ಲಿಲ್ಲ ದೊಗರ ಅಡುಕ್ರವ ನನ್ ಪಾತು ನಿಮ್ಮ ಕಾಡ್ಗಣಿಕ್ ಬೇಕ ಕಣ್ಣಪ್ರ್. ಅಂಡ. ಪಂಡಕು ದೂರುಸೊಣ್ಣೆ ಅವು ಇನ್ನೊಂಡ್ ಪಂಡು ನೂಟ್ಗ ಓನು, ನಂಡು ಟೂಟ್ಗು.

ನಂಡು ಅಪ್ಪದು ತನ್ನಿಕುಡಂಗೋ ಉಂಗ್ರುಕ್ ಅಂಡ ನಿಮ್ಟ್ ತನ್ನಿ ಮಾಣ, ನಿಮ್ಮ ಊಟು ಮಾಣ ಅಂಡು ಓತಿಕಾತು. ಆತ್ಗನಂಡು ಯಂತ್ಗ ಇತ್ನಿ ಬೇಜಾರಾಗಿಗರೆಯೇ ಅಂಡ. ಇನಿನಗ ಇಲಿ ಸುಪ್ಪಾಣಿ ಇಂತಿಂತವಾತ ಅಂಡ ನನ್ನೊಂ ಅಂಡು. ಆತ್ಗಂನುಡು ನನ್ಕ ನಿಮ್ಟ್ ಗಿರ್ಜಿ ಕಾಲಕ್ಟೇಕ ಸುತ್ತು ಮಿಂಬು ಅಂಡಕೋಟ ಅಂಡ. ಅಪ್ಪದು ಓತಿಕಾತು ಇನ್ನೊಂಡ ಪಂಡಟೂಟ್ಗ್ಪೋನು ಒಂಗಕ್ಕು ಟೂಟ್ಗು. ಅವ ಮಣಿ ಓಡಂಗೋ ಉಕ್ಕಟು ಅಂಡ. ಯಂತ್ಗ ಇತ್ನಿ ಬೇಜಾರು ಅಂಡು ಕೋಟ. ಆತ್ಗ ಇಲೆಸುಪ್ಪಾಣಿ ನನಕ್ಕ್ ಇಂತ ವಾತ್ಕ ಅಂಡ, ನಂಟ್ ಮರ್ಯಾದಿ ಆಡ್ತ ಅಂಡು. ಆತ್ಗ ಅವ ನನ್ಕ ನಿಮ್ಟ ಮಾರುದ್ಟ ಕುತ್ತಿಗಿಕ್ ಬೇಕ ರಂಡಾಣಿ ಸರಪಣಿ ಅಂಡು ಸೊಣ್ಣ. ಅಪ್ಪದು ಓತಿಕಾತುಯಾರ್‌ಟೂಡು ಮಾಣ ಅಂಡು ಅಪ್ಪಿಂಡು ಏರೇ ಒಯೋಟು ಮತ್ತು ಯೋರ್ ಟೂಟ್ಗುವರಲಿಲ್ಲ(ದಕ್ಷಿಣ ಕರ್ನಾಟಕದ ಕೊರಮರು: ೨೦೦೨(೨೦೦).

### ಕಥೆಯ ಕನ್ನಡ ಅನುವಾದ

ಒಂದು ಓತಿಕಾತ. ಆ ಓತಿಕಾತನಿಗೆ ನಾಲ್ಕು ಜನ ಹೆಂಡತಿಯರು. ಆ ನಾಲ್ಕು ಜನ ಹೆಂಡತಿಯರು ಯಾರ್ಯಾರು ಅಂದರೆ, ಇಲಿ, ಕೊಕ್ಕರೆ, ಏಡಿ, ಬೆಕ್ಕು. ಒಂದು ದಿನ ಓತಿಕಾತ ಏಳೂರ ಗೌಡ್ರ ಕರಕೊಂಡೋಗಿ ಕಲ್ಲು ಕಟ್ಟೆಯ ಮೇಲೆ ಕುತ್ಗಂಡು

ಪಂಚಾಯ್ತಿ ಮಾಡ್ತಾ ಇದ್ದಪೇಟ, ರುಮಾಲು ಸುತ್ತಿಕೊಂಡು. ಆವಾಗ ಇಲಿ ಸಾಸ್ವೆಯಷ್ಟು ಬುಟ್ಟಿ ಹೊತ್ಗೊಂಡು, ಜಡೆ ಹಾಕ್ಕೊಂಡು, ಸಣ್ಣನಾಮ ಇಟ್ಗಂಡು ಸಂತೋಗೋಗ್ಲೊಕೆ ಬಂದ್ಲು ಅಲ್ಲಾಸಿ. ಆವಾಗ ಓತಿಕಾತ ಪ್ರೀತಿಗೆ 'ಎಲ್ಗೋಗ್ತೀಯಾ' ಅಂತ ಕೇಳ್ದ. ಅದಕ್ಕೆ ಅವಳು 'ನಿನ್ನ ಬಿರಕ ಕೆಮ್ಮೆಗೆ. ನಿನ್ನ ಬೀಟ್ ಮೈಗೆ ಎಸರುಳ್ ಪ್ಯಾಟೇಲಿ ಎಣ್ಣೆತರಕ್ ಹೋಗ್ತೀನಿ. ನಿನ್ನ ಮೈಗೆ ಸವರೋಕೆ' ಅಂದ್ಲು. ಆವಾಗ ಆ ಓತಿಕಾತ 'ಇಂಥ ಮಾತ ಅಂದ್ಲಲ್ಲ' ನನ್ನ ಮರ್‍ಯಾದೆಯೆಲ್ಲ ಓಯ್ತು ಅಂದ. ಎದ್ದೋಗ್ಬಿಟ್ಟ ಬೆಕ್ಕಿನ ಮನೆಗೆ. ಆವಾಗ ನೀರ ಕಾಯ್ಸಿರಿ, ಎಣ್ಣೆ ಕಾಸರಿ ಮೈ ತೊಳೆಯಲು ಅಂದ್ಲು ಬೆಕ್ಕು 'ನಿನ್ನ ಎಣ್ಣೆ ಯಾರಿಗೆ ಬೇಕು, ನಿನ್ನ ನೀರು ಯಾರಿಗೆ ಬೇಕು ನನಗೆ ಬೇಡ' ಅಂದ. 'ಯಾಕಿಷ್ಟು ಬೇಜಾರಾಗಿ ಇದ್ದೀಯಲ್ಲ' ಅಂತ ಕೇಳಿದ್ಲು.

'ನಾನು ಏಳೂರ ಗೌಡ್ರ ಕುಂಡ್ರಿಸಿಕೊಂಡು ಪಂಚಾಯ್ತಿ ಮಾಡ್ತಾ ಇದ್ದೆ. ಅವಳು ಸಂತೆಗೆ ಹೋಗಲು ಬಂದಳು. ನನ್ನ ಮರ್ಯಾದೆ ಕಳದ್ಲು ಇಲಿ' ಎಂದ. ಅದಕ್ಕೆ ಬೆಕ್ಕು 'ಅವಳು ಅನ್ನೋಳೆ, ಅವಳು ಕಂಡೋರ ಮನೇಲಿ ಬಿಲ ತೆಗೆಯೋಳು ನನ್ನ ನೋಡಿ ನಿನ್ನ ಕಾಡಿಗೆ ಕಣ್ಣಿಗೆ ಬೇಕ ಕಣ್ಣಪ್ಪ' ಅಂದ್ಲು. ಹೆಂಡತಿಗೆ ದೂರು ಹೇಳಿ ಅವನು ಇನ್ನೊಬ್ಳು ಹೆಣ್ತಿ ಮನೆಗೆ ಹೋದ, ಏಡಿ ಮನೆಗೆ.

ಏಡಿ ಆಗ 'ನೀರು ಕೊಡ್ತಿ ಉಣ್ಣಕೆ' ಅಂದ್ಲು. 'ಇಂಗಿಂಗೆ ಇಲಿ ಸುಪ್ಪಾಣಿ ಇಂತಿಂತ ಮಾತ ಆಡಿದ್ಲು ನನಗೆ' ಅಂದ. ಅದಕ್ಕೆ ಏಡಿ ನನಗೆ 'ನಿನ್ನ ಗಿರ್ಜಿ ಕಾಲಿಗೆ ಬೇಕ ಸುತ್ತು ಮಿಂಚು' ಅಂತ ಕೇಳಿದ್ಲು, ಅಂದ್ಲು, ಆಗ ಓತಿಕಾತ ಇನ್ನೊಬ್ಳು ಹೆಂಡತಿಯ ಮನೆಗೆ ಹೋದ. ಕೊಕ್ಕರೆ ಮನೆಗೆ, ಅವ ಮಣಿ ಹಾಕ್ತಿ ಕುಂತಗಳಲಿ ಅಂದ್ಲು. ಯಾಕಿಷ್ಟು ಬೇಜಾರು 'ಅಂತ ಅಂದ್ಲು'. ಅದಕ್ಕೆ 'ಇಲಿ ಸುಪ್ಪಾಣಿ ನನಗೆ ಇಂಥ ಮಾತ ಅಂದ್ಲು, ನನ್ನ ಮಾರ್ಯದೆ ಕಳದ್ಲು' ಅಂದ. ಅದಕ್ಕೆ ಅವಳು ನನಗೆ ನಿನ್ನ ಮಾರುದ್ದ ಕುತ್ತಿಗೆಗೆ ಬೇಕ ಎರಡಾಣಿ ಸರಪಣಿ ಅಂದ್ಲು' ಅಂತ ಹೇಳಿದ್ಲು. ಆಗ ಓತಿಕಾತ ಯಾರ ಮನೇನು ಬೇಡಾ ಎಂದು ಅಲ್ಲಿಂದ ಬೇರೆ ಹೋಗ್ಬಿಟ್ಟ. ಮತ್ತೆ ಯಾರ ಮನೆಗೂ ಬರಲಿಲ್ಲ.

**ಭಾಗ್ಯಲಕ್ಷ್ಮಿ ಕಥೆ**

ಒಂಡೂರುಳ್ಳಿ ಒರ್ರುಗವುದು ಇಂದು. ಅವನ್ನೊಡುಳ್ಳಿ ವಿಜಯಲಕ್ಷ್ಮಿ ಇಂಥ. ಒಂಡ್ನಾಳು ಅವ ಓಯೋಡರುಕ್ಕು ಪಾತ. ಎಂತ್ಗಂಡಿಕೆ ಈ ಊಟಗೌಡು ಗುದ್ದಡಿಕೋಟಗ್ರ ಮಣಿ ಆತ್ಗಂಡೋಗಿ ತಲಿದದಕ್ಕಿ ಓಟ್ಗಂಡು ಬೂಧ್ಗಂಡು. ಈ ದರಿದ್ರನ್ ಟೂಟುಳ್ಳಿ ನಾನಿಕ್ರದಿಲ್ಲ ನಾನು ಓಯೋತ್ರ ಅನಬರ್ಕು ದರಿದ್ರ ಲಕ್ಷ್ಮಿ ಊಟ್ಗೋಳ್ರ. ಈ ಬೆರುಗೌಡು ಪಮುಡ್ರ ಗುದ್ದಡಿ ಕೋಟಗ್ರಮಣಿ, ಪಮುಡ್ರು ಮುಟ್ಟಕರಂಗ ಊಸ್ ಉಡರಂಗ ಮಣಿಮೇಸಿ ಊಕ್ಕುಗರಂಗ ಅಂತ ಮಣಿ ಓಟ್ಗಂಡು ಅಂಡು ಎಲ್ಲೋಟ. ಈ ಊಟುಳ್ಳಿ ಒರ್ರು ಬಡುವು ನಲ್ಲ ಸೆಡುಳ್ಳಿ ಕಾಡುಳ್ಳಿ ಪೊಂಡು, ಪುಳ್ಳಿಲ್ಲ ಎಚ್ಗಂಡು ವಾಸ ಸೇಯ್ತಾ ಇಂದು. ಎನಗ ತೆಯ್ದಾ ಇಂದು ಈ ಗೌಡ್ನಟೂಟುಳ್ಳಿ ಎಲ್ಲಾ ತಿಗಡಗಂಡೋಗಿ

ಎಚ್ಗಂಡು ಒಂಡ್ ಮಾಡ್ದು ಅಗರ ಸಾಮಾನೆಚ್ಗಂಡು, ಜೀವನ ಸೇಯ್ದಾ ಇಂದು ತಿಗುಡು, ಅಮಾನು ಆ ಟೂಟ್ಗುವಂದು ತಿಗಡತನ ಸೇಂದ್ಗಂಡು, ಸಾಮಾನು ಅತ್ಗಂಡು ವಾಸ್ಲಕ್ ವಂದು. ಭಾಗ್ಯಲಕ್ಷ್ಮಿ ಎಲರಿಕ್ ಪಾತ. ತಿಗಡ್ನೂ ಎಲ್ರಕ್ ವಾಸ್ಲಕ್ ವಂದು. ಅಪ್ಪದು ಇವನ ವಯಮ್ಕ ಇವ ತಾಕ್ನ. ಇದೊಂದು ಇನಗ ತಾಕ್ಸ್ ಪಮುಡ್ತ ಮಾಟ್ಲೆ ಅಂಡು ನಿಂಡ್ರು ಗಂಡು. ಆ ತಿಗುಡು ಪಾತು ಯಾರಮ್ಮನೀನು ಅಂಡು ಕೋಟು ನಾನಯ್ಯ ಈ ಊಟು ಭಾಗ್ಯಲಕ್ಷ್ಮಿ, ಈ ಊಟ ಸಾವ್ಕಾರು ಗುದ್ದಡಿಕಿ ವೋಟ್ಗಂಡು ಕ್ಕುಗರಂತಾ ಮಣಿ ಆತ್ಗಂಡೋಗಿ ತಲದಸ್ಗಿ ಒಟ್ಗಂಡು ಬೂದ್ಗಂಡು, ಈ ಊಟ್ಗ ದರಿತ್ರ ವಂಚು. ನಾನು ಅಕ್ಡಿ ಎಲ್ಲೋಕ್ರೆ ಈ ದರಿದ್ರನ ಟೂಡುಳ್ಳಿ ಇಕ್ರಿದಿಲ್ಲಾ ಅಂಡು ಒಗ್ರುಕ್ ಪಾತ. ಆ ಬಡವುನ್‌ಕು ಬಾರಿ ಸಂಕ್ತೊಂಚು.

ಈ ಊಟುಳ್ಳಿ ಭಾಗ್ಯ ಇಕ್ರಿಗಂಟ್ಲೆನಾನು ವಂದೊಂದು ತಿಗಡ್ತನಸೇಂದ್ಗಂಡು ಅತ್ಗಂಡೋಗಿ ನಂಟ ಪಂಡು ಪುಳ್ಳಿಲ ವರ್ಗವರಿತಾ ಇಗ್ರೆ. ಇವ ಎಲ್ಲೋಯಟಕೆ ಈ ಊಟ್ಗ ದರಿದ್ರವರದು. ಅನಬರ್ಕು ನನಕು ಬಾರಿ ಕಸ್ಪತ್ಕ್‌ಹರದು ಅಂಡು ಅವು ಅಂಗೆ ಉಕ್ಕಂಡು. ನನಕೆಂತಾರ ಸೆಟ್ಟಿಟು, ಹಿಂಸೆ ಸೆಯ್ಯಾಟು, ಮತಾಟು ನಾನು ಅಕ್ಕಡಿಕಿ ಓಯೋಟಿಕ ಭಾಗ್ಯಲಕ್ಷ್ಮಿ ಆಕ್ಡಿಕಿ ಓಯೋಡರ. ದರಿದ್ರಲಕ್ಷ್ಮಿ ಬೇಲಿ ವಾಸ್ಲಕವಂದು ನಿಂಡ್ರ ಗಂಡಿರ. ಅಪ್ಪದು ಬಡವು ವಾಸ್ಲುಳ್ಳಿ ವುಕ್ಕಂಡೋಟು ವುಡ್ರಿದಂಕ. ವುಕ್ಕಂಡಿದಪದು ಗೌಡು ಬೇಲಿಕೋಗ್ರಕು ವಂದು. ವಂದವು ಯಾರ್ಲ ನೀನು ಯಂತ್ಗವಂದಿಗ್ರ ಅಂಡು ಅವನ್ನ ಕೋಟು. ಅತ್ಗಅವು ಇನಿನಿಗ ಪಮುಡ್ರು ಗುದ್ದಡಿ ಕೋಟುಗ್ರಂತ ಮಣಿ ಆತ್ಗಂಡೋಗಿ ತಲಿದಸ್ಕಿ ವೋಟ್ಗಂಡು ಬೂದ್ಗಂಡಿದಯ್ಯಲ್ಲೆ ಅತ್ಗು ಭಾಗ್ಯಲಕ್ಷ್ಮಿ ನಿಂಟೂಟ್ಳಿ ಇಂದವ ಓಗ್ತಾ ಇಂದ. ನಿಂಟೂಟುಳ್ಳಿ ನಾನು ಕಾಲಾವದಿ ತಿಗಡ್ತನ ಸೇಂದ್ಗಂಡೋಗಿ ಪಂಡು ಪುಳ್ಳೆಲ ವರಗು ವರಿತಾ ಇಂದೆ. ಇಮಾನು ಒಂದು ತಿಗಡ್ತನ ಸೇಂದ್ಗಂ ಡೋಗ್ರಪ್ಪದು ಭಾಗ್ಯಲಕ್ಷ್ಮಿ ಬೇಲ್ಲಿಕೋಗ್ರಕ ವಂದ. ನೀನು ಯಾರಮ್ಮ ಎಂಕೊಕ್ರ ಅಂಡು ಕೋಟಿ ಆತ್ಗವ ಎಲ್ಲಾಸೊಣ್ಣಾ. ಆತ್ಗನಾನು ಇಂಗೆ ವಾಸ್ಲುಳ್ಳಿ ಭಾಗ್ಯಲಕ್ಷ್ಮಿ ಬೇಲ್ಕಿ ವೋಗುಲ್ಲಾರ ಮಾಟ್ಲೆ ವುಕ್ಕಂಡೋಟಿ. ಭಾಗ್ಯಲಕ್ಷ್ಮಿ ವುಳ್ಳೆಇಗ್ರ. ಇನ್ ಮೇನಿ ನೀನು ಮಣಿ ತಲ್ದಸ್ಕಿವೋಟ್ಗ ಮಾಣ ಅಂಡು. ಸಾವ್ಕಾರು ಆ ಬಡವನ್ಕು ನೀನು ನಾಮಾರ್ಲಿ ಕಾಂಗುಲ್ಲಾರ ಮಾಟ್ಲೆ ತಿಗಡ್ತನತ್ಗ ವರಮಾಣ, ನಿನಕ್ ಎಂದು ಬೇಕೋ ವಂದು ನನ್ನ ಕೋರು, ನೀನು ನಲ್ಲ ಉಪಕಾರ್ತ ಸೇಂದಿರ ಎಲ್ಲಾ ತರ್ರೆ ಅಂಡು ಅಮಸ್ಕು.

**ಕಾವ್ಯ**

ಕೊರಮ ಸಮುದಾಯದಲ್ಲಿ ಜನಪದ ಗೀತೆಗಳು, ಮದುವೆ ಗೀತೆಗಳು ಅಂದರೆ ಸೋಬಾನೆ ಪದಗಳು ಅವುಗಳಲ್ಲಿ ಗಂಡು ನೋಡುವ, ಹೆಣ್ಣು ನೋಡುವ ಪದಗಳು, ನೀರು ಹಾಕುವ ಪದಗಳು, ಬೀಗರ ಪದಗಳು ಇತ್ಯಾದಿ ಹಾಡುಗಳನ್ನು ಕೊರಮರಲ್ಲಿ ಕಾಣಬಹುದು.

**ಪ್ರಾರ್ಥನಾ ಗೀತೆ**

ಎದ್ದು ಶಿವ ಶಿವ ಏಳುತಲಿ ಶಿವ ಶಿವ
ನಿದ್ದುರುಗಣ್ಣಲಿ ಶಿವ ಶಿವ
ನಿದ್ದುರುಗಣ್ಣಲ್ಲಿ ಸಿವ ಶಿವ ನೆನದಾರ
ನಾ ಮಾಡೀದ ಪಾಪ ಪರಿಯಾರ ॥

ಸರಸೋತೆನ್ನೋಳು ಜನಗಮೂರ್ ಕಣ್ಣಿನೋಳು
ಕರಕಂಠದರಸ್ತಿ ಗಿರಿಜಮ್ಮ
ಕರಕಂಠದರಸ್ತಿ ಗಿರಿಜಮ್ಮ ಪಾರ್ವತಿ ದೇವಿ
ಬಾ ನನ್ನ ತಾಯಿ ಪದಗಳ್ಗೆ ॥

ಆರಲೆ ಮಾವಿನ ತಾಳಿನಲ್ಲಿರೋಳೆ
ತಾಳಸದ್ದೀಗ ಒಲಿಯೋಳೆ
ತಾಳಸದ್ದೀಗ ಒಲಿಯೋಳೆ ಸರಸೋತಿ
ನನ್ನ ನಾಲೀಗ ತೊಡರನ್ನ ಬಿಡಿಸಮ್ಮ ॥

ಸಿವ ಸಿವ ಅನ್ನೋರ ಸಿರಿಯಲ್ಲಿ ಇರಿಸಯ್ಯ
ಸಿವನ ಕೆಂಜಡುಗ ಮರುಗಾವ
ಸಿವನ ಕೆಂಜಡುಗ ಮರುಗಾವ ಎತ್ತೋರ
ಸಿರಿಯೊಳಗ ನಮ್ಮ ಇರಿಸಯ್ಯ ॥

**ಹೆಣ್ಣಿಗೆ ಸಂಬಂಧಪಟ್ಟ ಕಷ್ಟದ ಹಾಡು**

ಹೆಣಾಗುಟ್ಟೋದಕ್ಕೆ ಮಣ್ಣಾಗುಟ್ಟೋದು ಲೇಸು
ಮಣ್ಣಿನ ಮೇಲೆ ಮರಹುಟ್ಟಿ
ಮಣ್ಣಿನ ಮೇಲೆ ಮರಹುಟ್ಟಿ ಬೆಳೆದಾರ
ಹೋಗಿ ಬರೋ ಜಂಗಮಕ ನೆರಳಾದೋ ॥

ಪಾಪಿಯಾದ ಮೇಲೆ ಕ್ವಾಪ್ಯಾಕೋ ಜನುಮಾಕ
ನಾಕು ಜನ ಕುಂತಾಗ ನಗುವ್ಯಾಕೋ
ನಾಕು ಜನ ಕುಂತಾಗ ನಗುವ್ಯಾಕೋ ಜನುಮಾಕ
ಈ ಪಾಪೆಣ್ಣು ಯಾಕೋ ಧರೆಯಲ್ಲಿ ॥

ಅಲ್ಲಿ ತರಲಿಲ್ಲ ಇಲ್ಲಿ ಬೇಡಿದರಿಲ್ಲ
ನಾ ಎಲ್ಲಾರ ಸಮಕ ಇರಲಿಲ್ಲ
ನಾ ಎಲ್ಲಾರ ಸಮಕ ಇರಲಿಲ್ಲ ಶಿವಗುರುವೆ
ಈ ಪಾಪೆಣ್ಣು ಯಾಕೋ ಧರೆಯಲ್ಲಿ

ಸಾಮರಸ್ಯವಿಲ್ಲದ ಪತಿಯನ್ನು ಕೈ ಹಿಡಿದ ಹೆಣ್ಣಿನ ದುಃಖ
ಹಂತವಿಲ್ಲದ ಬಾವಿ ಜಂತವಿಲ್ಲದ ಸೀರ
ಸಂತೋಷಿಲ್ಲಾದ ಪತಿಯೋರು
ಸಂತೋಷಿಲ್ಲಾದ ಪತಿಯೋರು ಇದ್ದಾರ
ಸಂಜೇಲಿ ಕಣ್ಣೀರು ಹರಿದಾವ ॥

ಅಕ್ಷಾಯ ಮಗ ಹಾಸೀ ಬೆಳೆದರೇನು
ಅಸಿಲ್ಲದೋರ ಕೈ ಹಿಡಿದು
ಅಸಿಲ್ಲದೋರ ಕೈ ಹಿಡಿದು ಶಿವಗುರುವೆ
ಹಾಸಿಗೇಲಿ ಕಣ್ಣೀರು ಹರಿದಾವೋ ॥

ನುಗ್ಗಾಯ ಮರ ಬಗ್ಗಿ ಬೆಳೆದಾರೇನು
ಬುದ್ದಿಲ್ಲದವರ ಕೈ ಹಿಡಿದು
ಬುದ್ದಿಲ್ಲದವರ ಕೈ ಹಿಡಿದು ಶಿವಗುರುವೆ
ಮಗ್ಗಲಲಿ ಕಣ್ಣೀರು ಹರಿದಾವೋ ॥

ಓಲೆ ಒಳ್ಳೆದು ಓಲೊಳಗ ಚಿನ್ನವಿಲ್ಲ
ಸೀರ ಒಳ್ಳೇದು ಸೆರಗಿಲ್ಲ
ಸೀರ ಒಳ್ಳೇದು ಸೆರಗಿಲ್ಲ ಶಿವಗುರುವೆ
ರಾಯರೊಳ್ಳೇರು ಗುಣವಿಲ್ಲ ॥

ಗಂಡನಲ್ಲಿ ಗುಣವಿಲ್ಲ ಕೆಂಡದಲ್ಲಿ ತನುವಿಲ್ಲ
ಕೊಂಡಮಜ್ಜಿಗೆ ರುಚಿಯಿಲ್ಲ
ಕೊಂಡಮಜ್ಜಿಗೆ ರುಚಿಯಿಲ್ಲ ಶಿವಗುರುವೆ
ಗಂಡಾನ ಬೋಗ ತರಲಿಲ್ಲ

ಈರುಳ್ಳಿ ಖಾರ ಹ್ಯಾಗ ತಿಂದರು ಖಾರ
ನನ್ನ ಪತಿಯೋರಿಗೆ ಉಪಕಾರ
ನನ್ನ ಪತಿಯೋರಿಗುಪಕಾರ ಮಾಡಿದರೆ
ಅವರ ಮುರ್ಖಾದ ಬುದ್ಧಿ ಬಿಡರಲೆ

ಹಲಸೀನ ಕಾಯಾಗಿ ಹಾಕಿದ್ದಿ ಹೆಣಗಂಡ
ಅಸಮಾನಕಾರ ಪತಿಯೋರು
ಅಸಮಾನಕಾರ ಪತಿಯೋರು ಬತ್ತಾರಂತ
ಹಾಕಿದ ಹೆಣಗಂಟ ವದ್ದರೇನು

ಅತ್ತಿಗೆ ನಾದಿನಿಯುವರ ಜರಿಯುವಿಕೆ

ಎಲ್ಲೋಟ್ಟೊಂದ್ ಜಾವಸ್ದುಂಗ್ರ ಎಲೆಗಿಲೆ ಬೇಕೇನೆ
ಅಂತಪಿಂತ ಮಾಡ್ಸಿಕೋ
ಇಂತ ಪಿಂತ ಮಾಡ್ಸಿಕೊ
ಪಂತಿಮೇಲ್ ಬರಜನ
ನಿನ್ನ ನೋಡಿ ನಗ್ತರ
ಸೈ ಸಬಾಸ್ ಗಿರತ್ತಿಗ
ಸೋಬಾನ್ ಬೇಕೇನೆ

ಅತ್ತಿಗೊಳ್ಳೇಳಂತ ಇತ್ತಾಲ ಮನೆಕೊಟ್ಟೆ
ಅತ್ತಿಗ ಮಾಡೀದ ಇಪರೀತ
ಅತ್ತಿಗ ಮಾಡೀದ ಇಪರೀತ ಗಿಪರೀತ
ಕತ್ತೆಕಾಯೋನ ಕರ್ಕೊಂಡ್ಳು

ನಾದಿನೊಳ್ಳೇಳಂತ ಬೀದೀಯ ಮನೆಕೊಟ್ಟೆ
ನಾದೀನಿ ಮಾಡೀದ ಇಪರೀತ
ನಾದೀನಿ ಮಾಡೀದ ಇಪರೀತ ಗಿಪರೀತ
ನಾಯಿ ಕಾಯೋನ ಕರ್ಕೊಂಡ್ಳು
ಕ್ವಾಣೇಲಿ ಕೂತಕೊಂಡು ತಾನೇನ ಮಾಡ್ಯಾಳು
ಮೂಗಾಳ ಬೂದಿವಲ ಮುಂಡ
ಮೂಗಾಳ ಬೂದಿವಲ ಮುಂಡ ಮಾಡಿಕಂಡು
ಕೊತ್ತೀಯ ಕರಕೊಂಡು ಮಲಗವಳತ್ತಿಗ
ಉಚ್ಚೆ ಊದಾಳ ಒಲ ಮುಂದೆ
ಉಚ್ಚೆ ಊದಾಳೊಒಲ ಮುಂದೆ ಅತ್ತಿಗ
ಅವಳ ಕೊಚ್ಚೆಲ ಮೀನಂತ ಎಳತನ್ನಿ

ಇದ್ದೋಳ್ ನೋಡಮ್ಮ ಇಜ್ಜಾಲ ಮಸಿಯಾಗಿ
ತಿದ್ದಿದ ಬೈರುವ ತಿಕಿದಾಗಿ
ತಿದ್ದಿದ ಬೈರುವ ತಿಕಿದಾಗಿ ಅತ್ತಿಗ
ಅವಳೋದಲ್ ನೋಡಮ್ಮ ದರವೇಸಿ

ಹೋದೋಳ್ ನೋಡಮ್ಮ ವಾಗಾಲ ಮಸಿಯಾಗಿ
ವಾಸರ ಮನಿಯ ತಿದಿಯಾಗಿ
ವಾಸರ ಮನಿಯ ತಿದಿಯಾಗಿ ಅತ್ತಿಗ
ಅವಳೆದ್ದೋಳ್ ನೋಡಮ್ಮ ಬಿಕನಾಸಿ

ಕುಕ್ಕ ತಕ್ಕಂಡು ಕೊಕ್ಕೋರಿಗೋದಾಳು
ಕೊಕ್ಕೊರು ನಾಯಿ ತಗಲೀವೊ
ಕೊಕ್ಕೊರು ನಾಯಿ ತಗಲೀವೊ ಅತ್ತಿಗ
ನೀ ಕುಕ್ಕೆಯ ಮಡಗಿ ಶರಣೆನ್ನು

ಮೊರ ತಕ್ಕೊಂಡು ಪಕ್ಕದೂರಿಗೋದಾಳು
ಪಕ್ಕದೂರು ನಾಯಿ ತಗಲೀವೊ
ಪಕ್ಕದೂರು ನಾಯಿ ತಗಲೀವೊ ನಾದೀನಿ
ಮೊರಾಯ ಮಡಿಗಿ ಶರಣೆನ್ನು

ಕೋಳಿ ಮುರ್ಕಂಡು ಮುಳಾಯ ಕವರೋಳೆ
ಕೋಳಿಯವರು ಬಂದು ಲಗಲೆದ್ದು
ಕೋಳಿಯವರು ಬಂದು ಲಗರೆದ್ದು ಕುಣಿವಾಗ
ಕೇಳೆ ಅತ್ತೀಗ ಕಿವಿಕೊಟ್ಟು

ಅಟ್ಟಿದ ಬಾಡ್ ಅಗಲಲ್ಲಿ ಸುಟ್ಟಿದ ಬಾಡ್ ಸೂರಲ್ಲಿ
ರಕ್ತಾದ ತೊಳ್ಳ ಬದಿಯಲ್ಲಿ
ರಕ್ತಾದ ತೊಳ್ಳ ಬದಿಯಲ್ಲಿ ಅತ್ತಿಗ
ನಿನ ತಲವುದ್ರೊ ಒಲಿಯ ಬಿಡಲಿಲ್ಲೊ

ಕಣ್ಣೆನ ಜೇಬೆ ಕಳ್ಳೆಕಾಯ್ಯಗಾತ್ರ
ಮೂಗೀನ ಗೊಣ್ಣೆ ಮೊಳವುದ್ದ
ಮೂಗೀನ ಗೊಣ್ಣೆ ಮೊಳವುದ್ದ ನಾದಾನಿ
ನಿಮ್ಮಣ್ಣನ್ಗೆ ಮುತ್ತ ಕೊಡು ಹೋಗು

ನಮ್ಮಣ್ಣ ಬಂದ ನನಗ ಬಣ್ಣ ತಂದ
ನಿಮ್ಮಣ್ಣ ಬಂದ ನಿನಗೇನೇ
ನಿಮ್ಮಣ್ಣ ಬಂದ ನಿನಗೇನೇ ಅತ್ತಿಗ
ಕೆಮ್ಮಣ್ಣ ತಂದ ಎಡಕಲ್ಲ

ಕರ್ಮೀನ ಕಡಿಗಿಕ್ಕಿ ಸೀಗಡಿ ದಂಡಕಟ್ಟಿ
ಅರ್ಧ ಕೂಪಾಲಿ ತಲಗಿಕ್ಕಿ
ಅರ್ಧ ಕೂಪಾಲಿ ತಲಗಿಕ್ಕಿ ನಾದಾನಿ
ದಾಜನೋಡಂತ ಕಳಗಿವ್ನಿ

ಕಾಸಿನ ತಲೆಯೋಳೆ, ಸೀಸದ ಬಂದಿಯೋಳೆ
ದ್ವಾಸಕಲ್ಲಿನ ಮೊಕದೋಳೆ
ದ್ವಾಸಕಲ್ಲಿನ ಮೊಕದೋಳೆ ಅತ್ತಿಗ
ನಿನ್ನ ಸಾಸಾದ ಮಾತ್ಯಾಕೆ ಸಭೆಯಲ್ಲಿ

ಬೀಗರ ಪದಗಳು

ಬ್ಯಾಳ ಅರಬೀಗ ಬೆಳ್ಯಾಕಿ ನೋಡೀಳೆ
ಬ್ಯಾಳ ತೀರ್ತಂತ ಆಳತಾಳೊ
ಬ್ಯಾಳ ತೀರ್ತಂತ ಅಳ್ತಾಳೋ ಬೀಗಾತಿ
ನಾವಾರ್ ಜನ ಬಂದೀವಿ ಅಳಬ್ಯಾಡ

ಅಕ್ಕಿ ಗಡಗೀಗ ಅಂಗ್ಯೆಯಾಕಿ ನೋಡೀಕೊ
ಅಕ್ಕಿತೀರ್ತಂತ ಆಳ್ತಾಳ
ಅಕ್ಕಿತೀರ್ತಂತ ಆಳ್ತಾಳ ನಮ್ ಬೀಗಾತಿ
ನಾವ್ ಹತ್ ಜನ ಬಂದೀವಿ ಅಳಬ್ಯಾಡ

ಆಲದ ಹಣ್ಣಾಂಗೆ ಆರ್‌ಜನ ಬಂದವರ
ನಮ್ಮಾದಿ ಕಲ್ಲ ತುಳಿಲಾರು
ನಮ್ಮಾದಿ ಕಲ್ಲ ತುಳಿಲಾರು ಬೀಗಾರು
ಅವರಾರೂ ಜನರು ಮುದುಕಾರು

ಪಟ್ಟಿ ಬೀಗಾರ ಯಾವಾ ನಾವ್ ಕಾಣೊ
ಗಟ್ಟಿ ತುಪ್ಪದಲ್ಲಿ ವರ ಮಣ್ಣು
ಗಟ್ಟಿ ತುಪ್ಪದಲ್ಲಿ ವರ ಮಣ್ಣು ಸುಣ್ಣದ ತಿಳಿ
ಗ್ವಾಡ ತಳತಳನೆ ಒಳದಾವೊ

ರಾಯಗೊಳ್ ಬೀಗಾರ ಯಾವಾರ ನಾವ್ ಕಾಣೊ
ಜೇನು ಉತಪ್ಪದಲ್ಲಿ ವರಮಣ್ಣು
ಜೇನು ಉತಪ್ಪದಲ್ಲಿ ವರಮಣ್ಣು ಕೆಮ್ಮಣ್ ತಿಳಿ
ಅವರಗಾರ ತಳ ತಳ ಒಳದಾವೊ

ರಾಯ್ಗಳ್‌ಗವತಾರ ರಾಯ್ಗಲ್ ಬೆವತಾರೆ
ರಾಯ್ಗಳ್ ಚಿನ್ನಾದ ಉಡುದಾರ
ರಾಯ್ಗಳ್ ಚಿನ್ನಾದ ಉಡುದಾರ ನಮ್ ಬೀಗರ್ನ
ರಾಯ್ಗಳ್ ವಿಳ್ಯಾಕ ಬರ್ತಾರೋ

ಮದುಮಗನಿಗೆ ನೀರು ಹಾಕುವಾಗಿನ ಪದ

ಸರಸೋತಿ ಮುತ್ತೀನ ಸ್ವರವಾಗಿ ಬಾರಮ್ಮ
ದೊರೆಯ ಪಾಲಿಕರ ಮಗನೀಗ
ದೊರೆಯ ಪಾಲಿಕರ ಮಗನೀಗ ಮದುವೀಗ
ಸ್ವರವಾಗಿ ಬಾರೋ ಸರಸೋತಿ

ಅಂದದಿಂದ ಒಳಹಾಕಿ ಚಂಹದಿಂದೊಲಕೊರೆದು
ಗಂಧಾದ ಸೌದ ತಳಗೊಡ್ಡಿ
ಗಂಧಾದ ಸೌದ ತಳಗೊಡ್ಡಿ ಕಾದನೀರು
ರಂಬಾಯ ಮಗನೀಗ ಎರದಾರೋ

ಆಯದಿಂದ ಒಲೆವೂಡಿ ದಯದಿಂದೊಲ್ ಕೊರೆದು
ಮಾವಿನ ಸೌದ ತಳಗೊಡ್ಡಿ
ಮಾವಿನ ಸೌದ ತಳಗೊಡ್ಡಿ ಕಾದನೀರು
ಗುಂಪನ್ನಾಳೊರ ಮಗ ಮೀದ

ಎಣ್ಣೆ ಸೀಗೇಕಾಯಿ ನನ್ನ ಮಾಡಿತು ಬಂದೊ
ಇನ್ನು ಮಲಗವ್ನ ಮದುವಯ್ಯ
ಇನ್ನು ಮಲಗವ್ನ ಮದುವಯ್ಯ ಎದೆಮ್ಯಾಗ
ಸನ್ನ ಮಾಡೀವೋ ಉಗುರೆಣ್ಣ

ಅರಿಸಿನ ಸೀಗೆಕಾಯಿ ಸರಸನ್ನಾಡಿತು ಬಂದೊ
ಮರೆತು ಮಲಗವ್ನ ಮದುವಯ್ಯ
ಮರೆತು ಮಲಗವ್ನ ಮದುವಯ್ಯ ಪಕ್ಕದಲ್ಲಿ
ಸರಸವಾಡೀವೊ ನವಿಲಿಂಡು

ಆಲದ ಮಣಕ್ ಹೇಳಿ ಆರೇಳು ದಿನವಾದೋ
ಆಲದ ಮಣ ಬರಬೇಕು
ಆಲದ ಮಣ ಬಂದೊ ಹವಳದ ಚವರಿಗ ಬಂದೊ
ಅವರ ತಾಯಮ್ಮ ನೀರ ಬೆರಸೀಳೊ
ಅವರ ತಾಯಮ್ಮ ನೀರ ಬೆರಸಿ ಮತ್ತೇನೆಂದಾಳೊ
ಹವಳದ ಬಚ್ಚಲಗ ನಡಿಯಂದ
ಹವಳದ ಬಚ್ಚಲಗ ಯಾರ್‍ಯಾರು ಬರಬೇಕು
ಅವರ ಮಾವನ ಮಗಳು ಬರಬೇಕು

ಅವರ ಮಾವನ ಮಗಳು ಬರಬೇಕು ಅವರಕಯ್ಯ
ಹವಳದುಂಗುರವ ಗೆಲಬೇಕು

ಹತ್ತಿಮಣಿ ಕೇಳಿ ಹತ್ತೇಳು ದಿನವಾದೋ
ಹತ್ತೀಯ ಮಣಿ ಬರಬೇಕು
ಹತ್ತಿಮಣಿ ಬಂದು ಮುತ್ತೀನ ಚೌರಿಗ ಬಂದೊ
ಅವರೆತ್ತಮ್ಮ ನೀರ ಬೆರಸೀರೋ
ಅವರೆತ್ತಮ್ಮ ನೀರ ಬೆರಸಿ ಮತ್ತೇನಂದ
ಮುತ್ತಿನ ಬಚ್ಚಲಿಗ ನಡಿಯಂದ
ಮುತ್ತಿನ ಬಚ್ಚಲಿಗ ಮತ್ತ್ಯಾರು ಬರಬೇಕು
ಅವರತ್ತಾಯ ಮಗಳು ಬರಬೇಕು
ಅವರತ್ತಾಯ ಮಗಳು ಬರಬೇಕವನ ಕೈಯ
ಮುತ್ತಿನುಂಗುರವ ಗೆಲಬೇಕು

ಅಕ್ಕಿ ಇಕ್ಕ ಬನ್ನಿ ಚಿಕ್ಕ ಮುತ್ತೈದೊರೆ
ಲಕ್ಷೀಂತ ಪಡೆದ ಮಗನೀಗ
ಲಕ್ಷೀಂತ ಪಡೆದ ಮಗನ ಮದುವಯ್ಯ
ಅಕ್ಕಿ ಅಕ್ಷತೆಯ ಇಡಬನ್ನಿ

**ಹೆಣ್ಣು ಕರೆದುಕೊಂಡು ಹೋಗುವಾಗಿನ ಪದ**

ತಲೆಯ ಬಾಚ್ವಾನಗ ತಾಯಮ್ಮಗ ನಗುಬಂತು
ತಲೆಯ ಬಾಚೆಣ್ಣ ಕರಕೊಂಡು
ತಲೆಯ ಬಾಚೆಣ್ಣ ಕರಕೊಂಡು ಹೋಗ್ವಾಗ
ತಾಯಮ್ಮಗ ದುಃಖ ಎರಗೀತು

ಬಣ್ಣ ಉಡುವಾಗ ಅವರಣ್ಣಯಗ ನಗುಬಂತು
ಬಣ್ಣ ಉಡ್ಸಿ ಹೆಣ್ಣ ಕರಕೊಂಡು
ಬಣ್ಣ ಉಡ್ಸಿ ಹೆಣ್ಣ ಕರಕೊಂಡು ಹೋಗ್ವಾಗ
ಅವರಣ್ಣಯ್ಯನ ದುಃಖ ಎರಗೀತು

ಮುತ್ತೀನ ಮಣಿಯ ಎತ್ತಿಬೀದಿಗ ಬಂದೊ
ಮುತ್ತಿನ ಮಣಿಯೆ ಅಳಬೇಡ
ಮುತ್ತಿನ ಮಣಿಯೆ ಅಳಬೇಡ ನಿನ್ನ ಒಡೆಯೋ
ನಿಸ್ತ್ರದೈವಾರು ಕಳಸೀವೊ

ಧಾರೆ ಪದಗಳು

ಧಾರೆ ಹೊತ್ತೀಗ ಯಾರ್ಯಾರು ಬರಬೇಕು
ಧಾರಾದ ಕೊರಳ ಹಿರಿಯಣ್ಣ
ಧಾರಾದ ಕೊರಳ ಹಿರಿಯಣ್ಣ ಸೋದರ ಮಾವ
ಧಾರಿಯ ಹೊತ್ತಿಗೆ ನಿಲಬೇಕು

ಹಾಲಿನ ಗಿಂಡಿ ತಾಯಮ್ಮ ಹಿಡಕಂಡು
ಹಾಲ ಎರದಾಳು ಕೈತುಂಬ
ಹಾಲ ಎರದಾಳು ಕೈತುಂಬ ಅವರ ತಾಯಮ್ಮ
ಇಂದು ಕಂದಮ ರುಣಮಾಲ

ತುಪ್ಪಾದ ಗಿಂಡಿ ಅವರಪ್ಪಾಜಿ ಹಿಡಕೊಂಡು
ತುಪ್ಪಾ ಎರದಾರೋ ಕೈತುಂಬ
ತುಪ್ಪಾ ಎರದಾರೋ ಕೈತುಂಬ ಅವರಪ್ಪಾಜಿ
ಇಂದು ಕಂದಮ ರುಣಮಾಲ

ಎಣ್ಣಾಯ ಗಿಂಡೀಯ ಅವರಣ್ಣಾಯ ಹಿಡಿಕಂಡು
ಎಣ್ಣೆ ಎರೆದಾರೋ ಕೈತುಂಬ
ಎಣ್ಣೆ ಎರೆದಾರೋ ಕೈತುಂಬ ಅವರಣ್ಣಯ್ಯ
ಇಂದು ತಂಗಮಗ ರುಣಮಾಲ

ಒಂದು ತಿಂಗಳ ಮಗು ಎತ್ತು ಮುದ್ದಾಡಿ ಸಾಕಿ
ಗಂಧ ಕರಂಗಡಿಯ ಎಣಬಜ ಎದೆಹಾಲು
ಇಂದು ಕಂದಮಗ ರುಣಮಾಲ

ಚಪ್ಪರದ ಹಟ್ಟೀಗ ಹೋಗಿ ಬೀಸೋ ಗಾಳಿ
ಮತ್ತೊಂದು ಘಳಿಗ ತಡಮಾಡು
ಮತ್ತೊಂದು ಘಳಿಗ ತಡಮಾಡು ಅವರ ತಾಯಮ್ಮ
ತಾಯಿಯ ಬಳಗ ಶತಕೋಟಿ

ಆನೇಯ ಮೇಲೆ ಭಾರೀ ಜಂಗುಮ ಬಂದ
ಇಂದ್ರನ ನಾಡಿನಿಂದ ಶಿವಬಂದ
ಇಂದ್ರ ನಾಡಿಂದ ಶಿವಬಂದು ಏನೆಂದ
ಸಣ್ಣೆಣ್ಣಿಗ ಧಾರೆ ಎರಿಯಂದ

### ಮದುವೆ ಹಾಡು

ಶಾಂತಮ್ಮನ ಕಣಾಳು ನಡಜಿದು ಪಾಕರಕು ಹೋಗಮ ವಾಗೆ
ಈಗರ ಹೊಂದಿರಗಾ ಏವ್ರೂಟಿ ಇಳಿಜಿರಗಾ ಹಾರದಂಡಿಕ್ ಇಳಿಜಿರಗಾ
ಈಗರ ಓಳಕ ನಂಗಳ್ಕ ಇಲ್ಲಾ
ಕಳಸ ಪುಡಿಶಿಸ ಹಣಪಾನೆ ಈಗತಿ
ಕಳಸ ಪೊಳಕ ನಂಗ್ಳಕ ಇಲ್ಲಾ
ಕಂದಲಿ ಪುಡಜಿರ ಮುದ್ದಲಿ ಮುಜಾವ
ಕಂದಲಿ ಹೊಳಕ ನಂಗಳಕ ಇಲ್ಲಾ
ಈಗರಿಸಿ ಒಳ್ಳೆಯಳೆಂದು ದೇವರ ಉಟು ಕೊಡತೆ
ದೇವರ ಊಟ ಕತ್ತಲು ಹೊಟರಿ ಓ ಈಗರಸಿ
ಎಲ್ಲಾರು ಕಟ್ಟಿರಗಾ ಪೂವಿನ ದಂಡಿ ನಂಗ, ಈಗರಸಿ
ಕಟ್ಟಿರ ಪುಲ್ಲಿನ್ ಪೆಂಡಿ,
ನಂಗ ಅಣ್ಣಾ ಕದೀಗಿ ಇಲ್ಲಂಡು ಪರಸಗಂಡಾ
*(ಶ್ರೀಮತಿ ಮಲ್ಲಮ್ಮ ಗಂಡ ಯಮನಪ್ಪ, ಗುಲಬರ್ಗಾ)*

### ಕೊರವಂಜಿ ಪದ

ಬೀದಿ ಬೀದಿಯ ಮೇಲೆ ಹೊರಟಳು ಕೊರವಂಜಿ
ಕೇರಿ ಕೇರಿಯ ಮೇಲೆ ಹೊರಟಾಳೊ
ಕಣಿಯೇ ಕಣಿಯೇ ಎಂದು ಸಾರ್‍ಯಾಳು
ಬಾರಮ್ಮ ಕೊರವಂಜಿ ಬಾರೆ ನಮ್ಮನೆಗೆ
ಕಾಸು ಕೊಟ್ಟೇವು ನಾವು ಕಣಿ ಹೇಳೆ ಕೊರವಿ
ಕಾಸು ನಮ್ಮನೆಯ ಮುತ್ತಿನ ರಾಶಿ ಕಾಣು
ಒಂಟೆ ಕೊಟ್ಟೇವು ನಾವು ಕಣಿ ಹೇಳೆ ಕೊರವಿ
ಒಂಟೆ ನಮ್ಮನೆಯ ಕುಂಟೆಮ್ಮೆ ಹಿಂಡು ಕಾಣು
ಆನೆ ಕೊಟ್ಟೆವು ನಾವು ಕಣಿ ಹೇಳೆ ಕೊರವಿ
ಆನೆ ನಮ್ಮನೆಯ ಆಡಿನ ಹಿಂಡು ಕಾಣು
ಇನ್ನೇನು ಬೇಕಮ್ಮ ಬಿನ್ನಾಣಿ ಕೊರವಿ
ಮತ್ತೇನು ಬೇಕಮ್ಮ ಮಾಯಾವಿ ಕೊರವಿ
ತೆಂಗಿನ ದೇಶಕ್ಕೆ ಹೋಗಿದ್ದೆ ಮಗಳೆ
ತೆಂಗಿನ ಮರದಡಿ ಮಲಗಿದ್ದೆ ಮಗಳೆ
ಆ ತೆಂಕಣ ಗಾಳಿಯು ಬೀಸ್ಯಾವೆ ಮಗಳೆ
ತರತರದ ಕಣಿಯನ್ನು ಪೇಳುವೆನು

ಬಡಗಾರ ಸೀಮೆಗೆ ಹೋಗಿದ್ದ ಮಗಳೆ
ಬಾಳೆಯ ಮರದಡಿ ಮಲಗಿದ್ದೆ ಮಗಳೆ
ಆ ಬ್ಯಾಡರ ಗಾಳಿಯು ಬೀಸ್ಲಾದೆ ಮಗಳೆ
ತರತರದ ಕಣಿಯ ಪೇಳುವೆನು.

ಮಕ್ಕಳ ಹಾಡು
ಪತ್ತು ಪಾಡು ಪತ್ತು ಪಾಡು
ಪಾಟು ಕುಂಜೇ
ನಾನೇಟಿ ಪಾತ್ತೇ ಪೀಕೊಂಜೇ
ದಡ್ಡಲೆ ಮಡ್ಡಲೆ ಕ್ಯರೆಕುಶಗ
ಡೊಳ್ಳು ಮತ್ತು ದೋಣೆಕಾಟ
ಪಾಲು ಕಿಟಿ ಹನುಮಂತರಾಯ

**ಭಾವಾರ್ಥ**

ಹಾಡು ಹಾಡು ಹಾಡು ಹೇಳು
ಚಿಕ್ಕ ಗುಬ್ಬಿಯೇ ನಾನೆಲ್ಲಿ ಹಾಡಲೇ
ಹೊಲಸು ಗುಬ್ಬಿಯೇ
ದಡ್ಡಾ, ಮಂದ ಬುದ್ಧಿಯ ಕರೀ ಗುಬ್ಬಿಯೇ
ಡೊಳ್ಳು ಹೊಡೆಯಲೇ ಓತಿ ಕಾಟನೆ
ಹಾಲು ಕುಡಿಯೋ ಕೋತಿಯೋ
(ಸಂಜೆ ಹೊತ್ತಿನಲ್ಲಿ ಮಕ್ಕಳು ಕುಣಿಯಿಂದ ಈ ಹಾಡನ್ನು ಹಾಡುತ್ತಾರೆ)

ಈ ಹಾಡುಗಳಲ್ಲಿ ಕೊರವ ಹೆಂಗಸರು ಬದುಕಿನಲ್ಲಿ ಕಂಡು ಅನುಭವಿಸಿದ ಕಷ್ಟಕಾರ್ಪಣ್ಯಗಳು ಆಸೆ, ನೋವಿನ ಕಲ್ಪನೆಯ ಚಿತ್ರಣವನ್ನು ಕಾಣಬಹುದು.

**ಗಾದೆಗಳು**

ಕೊಕ್ಕರೆಗೊಂದು ಕೆರೆಯೇ
ಕೊರವನಿಗೊಂದು ಊರೆ

ಕೊರಮ ಕೂಡಿ ಕೆಟ್ಟ
ಡೊಂಬ ಆಗಲಿ ಕೆಟ್ಟ

ಕೋತಿಯ ಶವವನ್ನು
ಕೊರವರ ಸ್ಮಶಾನವನ್ನು ಕಂಡವರುಂಟೆ

ಪಂಡಿತನಿಗೆ ಆನೆ ಕೊಡು
ಕೊರಮನಿಗೆ ಬೆಕ್ಕು ಕೊಡು

ಕೊರವರ ಮತ್ತು ಇದಿಯನ್‌ಗಳ ಜಗಳ
ಸುಲಭವಾಗಿ ಬಗೆಹರಿಯತ್ತೆ

ಕೊರವರ ಹೆಂಗ್ಸು ಹೆತ್ರೆ
ಕೊರವ ಗಂಡ್ಸು ಇಂಗ್ತಿಂದ

ಕೊರವಂಜಿಗೆ ಬುಟ್ಟಿ ತಪ್ಪೋಲ್ಲ
ಜಂಗಮನಿಗೆ ಜೋಳಿಗೆ ತಪ್ಪೋಲ್ಲ

ಕೊರಮನಿಗೊಂದು ಹೆಸರಿಲ್ಲ
ಕೊಕ್ಕರೆಗೊಂದು ಕೆರೆಯಿಲ್ಲ

ಚಂದದ ಬಾಳಿಗೆ ಒಡವ್ಯಾಕೆ
ಹೊಸರಾಗಿ ಹಿಟ್ಟಿಗೆ ಮೊಸರ್ಯಾಕೆ

ಅಕ್ಕರ್ ಚಿಕ್ಕವ್ವಟ್ಟು ಕರ್ಮೀನ
ತಣ್ಣಿಗೆ ಬಿಟ್ಕು ಮ್ಯಾಗಳ್ ತಳ್ನೀರ

ಹೇಳ್ಕೆ ಮಾತ್ ಕೇಳಿ ಹೆಂಡ್ತಿ ತಲೆ ಬೋಳ್ಸಿ
ಯಾಕೋನನ್ ಹೆಂಡ್ತಿ ಗಡುಗತ್ತಾ ಅಂದ

ಕೋಳಿ ಕೇಳಿ ಮೆಣ್ಸರ್ದಾರ
ಕೊಕ್ರೆ ಕೇಳಿ ಬಲೆ ಬೀಸ್ತಾರ

ಮೂಗೆ ಹರಿದ ಮೊಂಡ್ ಚೂರಿ
ಮರ ಸೀಳೀತಾ

ಹೆಸರಾದವನ್ ಕೂಸದ್ರೆ
ಬಸರಾದವ ಹಡೀದಿರ್ತಾಳೆ

ಅರ್ಸ ಬೇಡ್ ಕೆಟ್ಟ
ತಿರ್ಕ ಕೂತ್ ಕೆಟ್ಟ

ಹಸುರುಯ್ಯುವಗ ಅಳಬಾರ್ದು
ಹಸೆಮ್ಯಾಲ್ ಕುಂತಾಗ ನಗಬಾರ್ದು

ಅವರಪ್ಪನ ಅರಮನೆಗಿಂತ
ನಮ್ಮಪ್ಪನ ಗುಡಿಸಲೇ ಲೇಸು

ಕೊಸದವನ್ಗೆ ಗೊತ್ತಿಲ್ದು
ಬರಿಕಿಸದವನ್ಗೇನ್ ಗೊತ್ತು

ಒಗಟು

ಗುಡ್ಡವೆಲ್ಲ ಬೆಂದರೂ
ಅವರಲ್ಲೊಂದು ಕೋಲು ಬೇಯೋದಿಲ್ಲ (ಹಿಟ್ಟು ಮತ್ತು ಹಿಟ್ಟಿನಕೋಲು)

ಸೀಮಿ ಮ್ಯಾಗಿನ ಹೆಂಗಸಿಗಿ
ಸೀರಿ ಇಲ್ಲ ಕುಬಸ ಇಲ್ಲ
ಕೊರಳಾಗ ಒಂದು ಗುಳ್ಳ ಕಟ್ಯಾರ (ಈಚಲು ಮರ)

ಹುತ್ತದ ಹೂವು ಕಂಡ
ಮುತ್ತಿನ ಭರಣಿ ಕಂಡ
ಅಲ್ಲೊಂದು ರಂಧ್ರ ಕಂಡ
ಅಲ್ಲೇ ಕೂತ್ಕಂಡ (ಬುಗುಡಿ,ಕಿವಿಯಾಭರಣ)

ಉತ್ರಾಸದ ಮೇಲೆ ಉತ್ರಾಣಿ ಗಿಡ ಹುಟ್ಟಿದೆ
ಕಿತ್ತರೂ ಬರಲ್ಲ, ಕೀರಾಡಿದರೂ ಬರಲ್ಲ (ಹಚ್ಚೆ)

ಯಾಪಾರ ಸಪಾರ ಯಾವಾಗ
ಎದುರು ಬದುರಿಗೆ ಕೂತಾಗ
ಅಳೋದು ಕರೆಯೋದು ಯಾವಾಗ
ಅರ್ಧ ಒಳಗ್ಯೆ ಹೋದಾಗ
ನಗೋದು ನಲಿಯೋದು ಯಾವಾಗ
ಪೂರ್ತಿ ಒಳಕ್ಕೆ ಹೋದಾಗ (ಬಳೆ ತೊಡಿಸುವುದು)

ಭಾಷೆ

ಕೊರಮ ಸಮುದಾಯದಲ್ಲಿ ವೃತ್ತಿಗನುಗುಣವಾಗಿ ಕಾಲಾಂತರದಲ್ಲಿ ಹಲವು ಪ್ರಭೇದಗಳು ಉಂಟಾಗಿದ್ದರೂ ಭಾಷೆಯ ದೃಷ್ಟಿಯಿಂದ ಭಿನ್ನತೆಗಳು ತೋರುವುದಿಲ್ಲ. ಸಾಮಾನ್ಯವಾಗಿ ಅಲೆಮಾರಿ ಸಮುದಾಯಗಳ ಭಾಷೆಗಳೆಲ್ಲವೂ ಲಿಪಿರಹಿತವಾದವುಗಳೇ ಆಗಿವೆ. ಇಂತಹ ವೈಶಿಷ್ಟ್ಯಗಳಿಂದ ಕೂಡಿದ ಹಲವಾರು ಲಿಪಿರಹಿತ ಭಾಷೆಗಳಲ್ಲಿ ಈ ಕೊರವರು ಆಡುವ ಕುಳಿರ್(ಕುಳುವ) ಎಂಬ ಭಾಷೆಯೂ ಒಂದಾಗಿದೆ. ಇದು ತಮಿಳು, ತೆಲುಗು ಹಾಗೂ ಕನ್ನಡ ಪದಗಳೆಲ್ಲವೂ ಸಮ್ಮಿಳಿತಗೊಂಡಿರುವ ಒಂದು ಅಪಭ್ರಂಶ ಭಾಷೆಯಾಗಿದೆ.

ಮೂಲತಃ ದ್ರಾವಿಡ ಜನಾಂಗವಾದ ಇವರು, ಪ್ರಾಯಶಃ ತಮಿಳುನಾಡಿನಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆನಿಂತವರಿರಬಹುದು. ಕಾರಣ ಇವರು ಮಾತನಾಡುವ ಕುಳಿರ್ ಭಾಷೆಯಲ್ಲಿ ಕನ್ನಡ ತೆಲುಗಿನ ಪ್ರಭಾವಕ್ಕಿಂತ ತಮಿಳಿನ ಪ್ರಭಾವವೇ

ಹೆಚ್ಚಾಗಿ ಕಂಡುಬರುತ್ತದೆ. ಇವರು ಮೂಲ ತಮಿಳುನಾಡಿನವರಾದರೂ ಬಹಳದಿನಗಳ ಕಾಲದಿಂದಲೂ ಕರ್ನಾಟಕದಲ್ಲಿ ನೆಲೆಸಿ ಕನ್ನಡಿಗರೊಡನೆ ಸಮ್ಮಿಳಿತಗೊಂಡಿರುವುದಾಗಿದ್ದು ಅವರ ಆಚಾರ ವಿಚಾರಗಳಲ್ಲಿ ನಡೆ ನುಡಿಗಳ ಮೇಲೆ ಹೆಚ್ಚಾಗಿ ಕನ್ನಡ ಸಂಸ್ಕೃತಿಯ ಹಾಗೂ ಕನ್ನಡ ಭಾಷೆಯ ಪ್ರಭಾವ ಹೊಂದಿರುವುದು ಗಮನಿಸಬಹುದು.

ಹಿರೇಂದ್ರ ಕೆ. ರಕ್ಷಿತ್ ಅವರು ಕೊರಚರು ಭಾಷೆಯು ತಮಿಳು ಮೂಲದ್ದೆ ಎಂಬ ಮಾತಿಗೆ ಪೂರಕವಾಗಿ ಈ ಕೆಳಗಿನಂತೆ ತಿಳಿಸಿದ್ದಾರೆ. ಇದನ್ನು ಗಮನಿಸಿದಾಗ ತಮಿಳು ಅವರ ಮೂಲ ಭಾಷೆ, ಭೌಗೋಳಿಕ ಹಿನ್ನೆಲೆಯಲ್ಲಿ ಭಾಷಾರೂಪಾಂತರ ಹೊಂದಿ ಅನ್ಯ ಭಾಷೆಯ ಶಬ್ದಗಳನ್ನು ಒಳಗೊಂಡಿದೆ ಎನ್ನಬಹುದಾಗಿದೆ. Originally they spoke Tamil in all the Tree States. But for the last several decades they are fast taking to the languages of the respective states. ಎಡ್ಗರ್ ಥರ್ಸ್ಟನ್ ಅವರು "In communication among them selves. The Koravas and the Yerukalas speak a corrupt polyglot. In which the words derived from several Languages been little ressembalance to the original. Their words appear to be taken chiefly from Tamil, Telagu and Canarise"ಎಂದು ಹೇಳಿದ್ದು ಕೊರವರು ಮತ್ತು ಯರಕುಲರು ಕನ್ನಡ, ತಮಿಳು ಮತ್ತು ತೆಲುಗು ಭಾಷೆಗಳ ರೂಪಾಂತರಗೊಂಡ ಶಬ್ದಗಳನ್ನು ಬಳಸುತ್ತಿದ್ದು. ಅವು ಮೂಲ ಭಾಷೆಯೊಡನೆ ಹೊಂದಿರುವ ಸಂಬಂಧವನ್ನು ಗಮನಿಸಬಹುದಾಗಿದೆ. ಬೇರೆ ಬೇರೆ ಭೌಗೋಳಿಕ ಹಿನ್ನೆಲೆಯಲ್ಲಿ ಅನ್ಯ ಭಾಷೆಯ ಭಾಷೆಗಳ ಸಂಪರ್ಕದಿಂದ ಈ ಬೆಳವಣಿಗೆಯನ್ನು ಕಾಣಬಹುದಾಗಿದೆ.

ಅಬೇ ಡುಬೋಇಬಿಸ್ ಅವರು Koravas besides speaking Telugu Tamilu and Kanarese are said also to have a Gipsy Language of theirown ಎಂದು ಹೇಳಿರುವುದು ಕೊರಚರು ಕನ್ನಡ, ತಮಿಳು, ತೆಲುಗು ಮಿಶ್ರಣದ ಭಾಷೆಯನ್ನು ಬಳಸುತ್ತಾರೆ ಎಂದು ಅದು ಅವರದ್ದೇ ಆದ ಜಿಪ್ಸಿ ಎಂದು ಹೇಳಿದ್ದು ಆದರೆ ಜಿಪ್ಸಿ ಭಾಷೆಯ ಕುರಿತು ಹೆಚ್ಚಿನ ವಿವರವನ್ನು ಅವರು ನೀಡದೆ ಇರುವುದರಿಂದ ಜಿಪ್ಸಿ ಭಾಷೆಯ ಮೂಲ ಕುರಿತು ತಿಳಿಯಲು ಸಾಧ್ಯವಾಗುವುದಿಲ್ಲ.

ಕೊರಮ ಸಮುದಾಯದಲ್ಲಿ ತಮ್ಮ ಮೂಲ ಭಾಷೆಯನ್ನು ತೊರೆದು ಹೆಚ್ಚಾಗಿ ಕನ್ನಡವನ್ನೇ ಅವಲಂಬಿಸಿ ಮಾತನಾಡುತ್ತಾರೆ. ಇಂದಿನ ತಲೆಮಾರಿನ ಜನಾಂಗಕ್ಕೆ ಕುಳಿರ್ ಭಾಷೆಯ ಬಗ್ಗೆ ಹೆಚ್ಚಿನ ಅರಿವು ಇಲ್ಲದಿರುವುದು ಸಮೀಕ್ಷೆಯಿಂದ ತಿಳಿದು ಬರುತ್ತದೆ. ಕೊರಮರು ಮನೆಯಲ್ಲಿ ಕುಳಿರ್ ಬಾಷೆಯನ್ನು ಮಾತನಾಡಿದರೆ ಹೊರಗೆ ಸ್ಥಳೀಯವಾಗಿ ಬಳಕೆಗೊಳ್ಳುವ ಭಾಷೆಯನ್ನು ಮಾತನಾಡುತ್ತಾರೆ.

ಕೋಷ್ಟಕ: ೮.೧ ಕೊರಮರ ಕುಳಿರ್ (ಕುಳುವ) ವಾಕ್ಯಗಳ ರಚನೆ

| ಕನ್ನಡ | ಕುಳಿರ್ |
|---|---|
| ಹೆಸರೇನು | ಪೇರ್ ಎಂದರವಾ |
| ಊಟಮಾಡು | ಉಂಗುರದವಾ |
| ಕುಳಿತುಕೋ | ಉಕ್ಕೋ |
| ಊಟಾ ಆಯಿತೆ | ಉಂಗರದು ಆಸಾ |
| ಹೊಟ್ಟೆ ಹಸಿಯುವುದು | ವರಗಪೆಸಿಗಿ |
| ಸ್ನಾನ ಆಯಿತೆ | ತೆಣ್ಣಿವಾಂತರಣಂಗ |
| ಮದುವೆ ಆಯಿತಾ | ಕನ್ನಾಳು ಆಸಾ |
| **ಊಟಮಾಡು** | ಸೋರ್ ಮುಗ್ಗು |
| ಹನುಮಯ್ಯ ಬಾ ಬಾ | ಹನುಮಯ್ಯ ವಾ ವಾ |
| ರಾಮಯ್ಯ ಹೋಗು | ರಾಮಯ್ಯ ಓವಾ |
| ಊರುಕುಹೊಗರೆ | ಊರಿಗೆ ಹೋಗುತ್ತೇನೆ |
| ಎಮನು ವರ್‍ರಿ | ಯಾವತ್ತು ಬರುತಿ |
| ಉಡಲೆ ಎರ್‍ರೆ | ನಾಳೆಬರುತ್ತೇನೆ |
| ನಮ್ಮಪ್ಪ ಮಾಂಸ ತಕ್ಕಂಡ್ ಬರ್‍ತಾನೆ. | *ನಂಗಾವು ನಾಂಬರಿ ಕರಿಯದ್ತಕ್ಕಂಡ್* |
| ನಾವು ರಾತ್ರಿ ಮಾಂಸ ತಿಂತೀವಿ | *ಹೊರಾನು ನಾಗ್ ಕರಿ ತಿಂಗರಿಗ* |

| ಕನ್ನಡ | ಕುಳಿರ್\ಕುಳುವ | ಕನ್ನಡ | ಕುಳಿರ್\ಕುಳುವ |
|---|---|---|---|
| **ಪದಾರ್ಥಗಳು** | | | |
| ಹಿಟ್ಟು | ಕಳಿ | ದುಡ್ಡು | ಪನ್ನು |
| ಅನ್ನ | ಸೋರು | ಸಾರು | ಕಟ್ಟು |
| ಮಾಂಸ | ಕರಿ | ತೆಂಗಿನಕಾಯಿ | ತೋಗಾಯಿ |
| ಅಕ್ಕಿ | ಎರಸಿ | ಜೋಳ | ಜೊಳಮು |
| ಭತ್ತ | ನೆಲ್ಲು | ರಾಗಿ | ಕೋರುಗು |
| ತಂದೆ | ಯಾವ | ತಾಯಿ | ಯಮ್ಮ |
| ಚಿಕ್ಕಪ್ಪ | ಸಣಾವ | ದೊಡ್ಡಪ್ಪ | ಬೆರಾವ |
| ಹೆಂಡತಿ | ಕುಳಸಿ | ಅತ್ತಿಗೆ | ನಂಗ |
| ಅಳಿಯ | ಮರಮಗ | ನಾದಿನಿ | ಮುಚ್ಚಿನ್ಸ್ |
| ಭಾವಮೈದ | ಮುಚ್ಚಾದಿ | ಸಣಮ್ಮ | ಚಿಕ್ಕಮ್ಮ |
| ಹಂದಿ | ಪಂಡ್ರಿ | ಕೋಳಿ | ಕೊಯಿ |
| ಎಮ್ಮೆ | ಎಲ್ಮಡ್ | ಕುರಿ | ಕುರುಬಡು, ಗೂರ್‍ರಿ |
| ಕೊತಿ | ಫೂನೆ | ಸಿಂಹ | ಸಿಂಹನ್‌ಪಾರು |

| ಕನ್ನಡ | ಕುಳಿರ್\ಕುಳುವ | ಕನ್ನಡ | ಕುಳಿರ್\ಕುಳುವ |
|---|---|---|---|
| ಮೊರ | ಸೋಟಿ | ಚುಕ್ಕೆ | ಪಣಿ |
| ಬಿದಿರು | ಇದಿರು | ಎಮ್ಮೆ | ಎಲಿಮಿ |
| ಸಾರಾಯಿ | ಕರತನ್ನಿ | ಹಗ್ಗ | ಕರಗು |
| ಒಲೆ | ಅಡುಪು | ಚೀಲ | ತಿತ್ತಿ |
| ಹೊಡೆಯುವುದ | ಪೋತಿಗ್ರದು | ಕತ್ತೆ | ಕದಿ |
| ದನ | ಮಾಡು | ನಾಯಿ | ಕವಾಲು |
| ಮೊಲ | ಕುಂದೇಲಿ | ಪೊರಕೆ | ಪರಕಡ್ಡಿ |
| ಕರೆಮೂತಿಹಕ್ಕಿ | ಕರೆತೆಲಿಯ | ಮುರಕಾಟಿ | ಮುರುವ |
| ಆಗಸ | ಸಾಕ್ಲವು | ಕ್ಷೌರಿಕ | ತಲಕಾಯಿಬಟ್ರವು |
| ಕೈ | ಶ್ಯಾತಾಳು | ಕುರಿ | ಕುರುಬಾಡು |
| ಕಾಗೆಸಿಳ್ಳ | ಏಲಿಗ | ಕೂದಲು | ಮೆಗರು |
| ಗೌಜಿಗನಹಕ್ಕಿ | ಕೆರವಾದಿ | ಹಂದಿ | ಪಂಡ್ರಿ |
| ಅಂಗನಕ್ಕಿ | ಕಾಡ | ಬಾವಲಿ | ಸೀಕೆಕುಂಜು |
| ನರಿ | ಬೆರನಕ್ಕ | ಸಂಬಾರಕಾಗೆ | ಸಂಬಾರುಪೊತು |
| ಕಾಲು | ಕಾಪಾಲು | ಬೆನ್ನು | ಎನ್ನು |
| ಸೆರ್ಲೆಹಕ್ಕಿ | ಸೆರಗ | ಕೊಳವಂಕ | ಕಾನೋಗೋಯಿ |
| ತೆಂಗಿನಕಾಯಿ | ಒಡಿಪಾನು | ಉಣಿಗೊರವ | ನಣುವಯಾ |
| ಕರಿಮೀನು | ಕೆರವಾಡು | ಕುಲ್ಡಗೊಕ್ರ | ಮಡೆಗುಡ್ಡ |
| ಹರಿವೆಸೊಪ್ಪ್. | ಗೊದ್ದರನಕ್ಕಿ | ಅಕ್ಕಿ | ಕೆಂಚಾಳನಕ್ಕಿ |
| ಬೆಲ್ಲ | ತೀಪಾನು | ಅಕ್ಕಿನರಿ | ಗುಂತನಕ್ಕ |
| ಈರುಳ್ಳಿ | ಉಲಗಡ್ಡಿ | ಬೆಳ್ಳುಳ್ಳಿ | ಒಂಗಡ್ಡಿ |
| ಅಸಿಟ್ಟು | ಮಾವು | ಮೆಣಸು | ಮಳಕಾಯಿ |

| ಕುಳಿರ್ | ಕನ್ನಡ | ಕುಳಿರ್ | ಕನ್ನಡ |
|---|---|---|---|
| ಕೊಣಕ್ಕಿ | ಪುಂಡೆ ಪಲ್ಲಿ | ವದ್ಲಗಾಯಿ | ಬದನೆಕಾಯಿ |
| ತಮಟೆಪಂಗು | ಟೊಮೆಟೆ ಹಣ್ಣು | ಮಳಕಾಯಿ | ಹಸಿಮೆಣಸಿನ ಕಾಯಿ |
| ಪುಳಿಬಂಗ್ | ಹುಣಸಕಾಯಿ | ನಲ್ಲೆಹಣ್ಣೆ | ಒಳ್ಳೆಎಣ್ಣೆ |
| ನಕ್ಕಿ | ಸಾರ್ | ಕಾಳಿ | ಮುದ್ದೆ |
| ತೆನೆಸೋರು | ನವಣೆಅನ್ನ | ಊರುಕು | ಊರಿಗೆ |
| ಬುಜಗ | ಮಲಗು | ನಡ | ನಡಿ |
| ಸೆಯಿ | ಮಾಡು | ಏದಿ | ಎದ್ದೇಳು |
| ಸೀಲಿ | ಸೀರಿ | ಮಕ್ಕ | ಮಗ |

| ಕುಳಿರ್ | ಕನ್ನಡ | ಕುಳಿರ್ | ಕನ್ನಡ |
|---|---|---|---|
| ಮಣವು | ಗಂಡ | ಅಂಬ್ಳೆಮಾನ | ಗಂಡುಮಗ |
| ಪಂಗೇರಾಗುಂಟ್ಟಿ | ಹೆಣ್ಣುಮಗು | ಅಪಡೆ ಕಗೆ | ತಾತ |
| ಕಗಿಸಿ | ಆಯಿ | ಬೆರ್ರಮ್ಮ | ದೊಡ್ಡವ್ವ |
| ಮ್ಯಾನತ್ತೆ | ಸೋದರತ್ತೆ | ಮ್ಯಾನಮಾವ | ಸೋದರಮಾವ |
| ಮೆಚ್ಚನಿಸಿ | ಗಂಡನತಂಗಿ | ಮೆಚ್ಚನ | ಮೈದುನ |
| ನಂಗಾ | ಅಣ್ಣನ ಹೆಂಡತಿ | ಸಿಗಳಿ | ನಾಳೆ |
| ಪೂನಿ | ಬೆಕ್ಕು | ನಕ್ಕಿ | ನರಿ |
| ಸಲಗ | ಗಂಡುಹಂದಿ | ಪಡ್ಡಿಗುನ್ನಿ | ಹೆಣ್ಣುಹಂದಿ |
| ಕೊಯಿಕುಂಬು | ಕೋಳಿಮರಿ | ಮುಟ್ಟೆ | ತತ್ತಿ |
| ಕರ್ರಿ | ಮಾಂಸ | ಮುಂಗ್ಲಿ | ಮುಂಗುಸಿ |
| ಎಲುಕುಟ್ಟಿ | ಇಲಿ | ಎಲ್ಮಿದೊಡಿ | ಎಮ್ಮೆಕರ |
| ಮಾಡು | ಧನ | ಕುಟ್ಟಿ | ಮರಿ |
| ಪಾಕು | ಅಡಕೆ | ಎಲಾಬಾಕು | ಎಲೆ ಅಡಕೆ |
| ಸುಣಾಂಯು | ಸುಣ್ಣ | ಹೋಟಿನಾಯಿ | ಬೇಟೆನಾಯಿ |
| ಬಂತಿ | ಕವದಿ | ಕಳತು | ಪ್ಲೇಟ್ |
| ಎಗಿ | ದಾರಿ | ಸೋಟಿ | ಮರ |
| ಚೆಂಬು | ತೆಂಬಿಗೆ | ಚರಪಂಗ | ಚಪ್ಪಲ್ |
| ಸಟ್ಟಿ | ಕುಬುಸ | ಊಸಲು | ಬಾಕಲು |
| ಊಟು | ಮನೆ | ಮಗರು | ಕೂದಲು |
| ಗಾಜಂಗ | ಬಳಿ | ಪೂವಾ | ಹೂವಾ |
| ತೆನ್ನಿ | ನೀರು | ವಾಯಿ | ಬಾಯಿ |
| ತೆರಿ | ನೆಲ | ಮಾತಿ | ಮಾತು |
| ನೇಸು | ನಿನ್ನೆ | ಮುಂದೆನೆಸು | ನಾಡದ |
| ಇಮನು | ಇವತ್ತು | ಪೆರು ಪೆಗರು | ಹೆಸರು |
| ಕಂದ್ಲು | ತೊಗರಿ | ಶೆಟ್ಟಿ | ಗಡಿಗಿ |
| ನೆಪ್ಪಿ | ತುಪ್ಪ | ಪಾಲು | ಹಾಲು |
| ಪೆರಗು | ಮೊಸರು | ಮೆರಿಮಗ | ಸೊಸೆ |
| ಅಕ್ಕತಂಗ್ಸಿ | ಅಕ್ಕತಂಗಿ | ತಂಗ್ಸಿ | ತಂಗಿ |
| ಸಡಿ | ಗಿಡ | ಮಳಕಾಯಿ | ಮೆಣಸಿನಕಾಯಿ |
| ಪಚ್ಚೆಮಳಕಾಯಿ | ಹಸಿಮೆಣಸಿನಕಾಯಿ | ಕೊಲ್ಲಿಕಿಹೋಗಾರೆ | ಎಲಕ್ಕೆ ಹೋಗುತ್ತೇನೆ |
| ಕಳ್ಳ್ | ಹೆಂಡ | ಕುಡುಸುವರ್ರೆ | ಕುಡಿದುಬರುತ್ತೇನೆ |

| ಕುಳಿರ್ | ಕನ್ನಡ | ಕುಳಿರ್ | ಕನ್ನಡ |
|---|---|---|---|
| ಕರ್ತ್‌ತೆನ್ನಿ | ಸರಾಯಿ | ಉಂಗಾರೆ ಮಗಸು | ಊಟ |
| ಪೊಡರು | ಬ್ಯಾಡರ್ | ನಕ್ಕಳಿಹೊಡ್ರವಿ | ಉಪ್ಪರ್ |
| ವಳಗವಿ | ಗೌಡ | ಸೋರವಿ | ವಡ್ಡರ್ |
| ತೆಲಿಮೆನವಿ | ಕಬ್ಲಿಗೆಯ | ಪೆಣಮವಿ | ಕುಲ್ಕರ್ಣಿ |
| ಉಲ್ಗೊರು | ಮುಸ್ಲಿಂ | ಗೊಲ್ಲವಿ | ಗೊಲ್ರ |
| ಮೊಗರವಿ | ಕುರುಬರು | ಜಂಗತವಿ | ಸ್ವಾಮಿ |
| ಬಡಿಗೇವಿ | ಬಡಿಗೇರು | ಪೆರವರಗಯ್ಯ | ಬಳೆಗುಂಡು |
| ವರಗು | ಕಟ್ಟಗಿ | ನೆರಪು | ಬೆಂಕಿ |
| ವಡಪು | ವಲಿ | ಕಟ್ಟಡ | ಅಂಚು |
| ಪೆಲ್ಲು | ಹಲ್ಲು | ಪರ್ರವಿ | ಮಾದಿಗ |
| ಬೆರ್‌ಪರ್ರವಿ | ಹೊಲೆಯರು | ಹುಳ್ಳಿ | ಒಳಗಡೆ |
| ಬೈಲಿ | ಹೊರಗಡೆ | ಊಟು | ಮನೆ |
| ಇಡಿಗವಿ | ಇಳಿಗೇರು | ಅಣ್ಣಿಹೊಡರವಿ | ಗಾಣಿಗೆರು |
| ತಿಪು | ಸಿಹಿ | ಪೂವು | ಹೂವು |

| ಕನ್ನಡ | ತಮಿಳು | ಕುಳಿರ್\ ಕುಳುವ | ಕನ್ನಡ | ತಮಿಳು | ಕುಳಿರ್\ ಕುಳುವ |
|---|---|---|---|---|---|
| **ಪದಾರ್ಥಗಳು** | | | | | |
| ನೀರು | ತಣ್ಣಿ | ತನ್ನಿ | ಅಕ್ಕಿ | ಅರಸಿ | ಎರಸಿ |
| ಮುದ್ದೆ | ಕಳಿ | ಕಳಿ | ಅನ್ನ | ಚೋರು | ಸೋರು |
| ಸಾರು | ಕೊಳಂಬು | ಕಟ್ಟು | ಹಾಲು | ಪಾಲು | ಪಾಲು |
| ರಾಗಿ | ಕೆವರು | ಕೋರ್‍ಗ್ಗ | ಬಟ್ಟೆ | ತುನಿಯೂ | ತುಣಿವಾನು |
| ಮದುವೆ | ಕಲ್ಯಾಣ | ಕಣಾಳ | ಮನೆ | ವೀಡು | ವೂಡು |
| ಬೆಂಕಿ | ನೆರುಪ್ಪ್. | ನೆರ್ಪು | ದೀಪ | ವಿಳಕ್ಕು | ವಳಕು |
| ಹಾವು | ಪಾಂಬು | ಪಾಮು | | | |
| **ಸಂಖ್ಯೆಗಳು** | | | | | |
| ಒಂದು | ಒಂಡ್ರು | ಒಂಡು | ಎರಡು | ಇರೆಂಡು | ರಂಡು |
| ಮೂರು | ಮೂನ್ರ | ಮೂಡು | ನಾಲ್ಕು | ನಾಂಗು | ನಾಲು |
| ಐದು | ಐಂದು | ಅಂಜು | ಆರು | ಆರು | ಆರು |
| ಏಳು | ಏಲು | ಓಗ್ | ಎಂಟು | ಎಟ್ಟು | ಆಟ್ಟು |
| ಒಂಭತ್ತು | ಒಂಬದು | ಒಂಬದಿ | ಹತ್ತು | ಪತ್ತು | ಪತ್ತು |
| ಹನ್ನೊಂದು | ಪದಿನೊಣ್ಣು | ಪನ್ನೊಂಡು | ಹನ್ನೆರಡು | ಪನಿರೆಂಡು | ಪನ್ನೆಂಡು |

| ಕನ್ನಡ | ತಮಿಳು | ಕುಳಿರ್\ ಕುಳುವ | ಕನ್ನಡ | ತಮಿಳು | ಕುಳಿರ್\ ಕುಳುವ |
|---|---|---|---|---|---|
| ಹದಿಮೂರು | ಪದಿಮೂನ್ರು | ಪದಿಮೂಡು | ಹದಿನಾಲ್ಕು | ಪದಿನಾಂಗು | ಪದಿನಾಲು |
| ಹದಿನೈದು | ಪದಿಐಂದು | ಪದಿಂಜು | ಹದಿನಾರು | ಪದಿಆರು | ಪದಿಆರು |
| ಹದಿನೇಳು | ಪದಿನೇಳು | ಪದಿನೊಗು | ಹದಿನೆಂಟು | ಪದಿನೆಟ್ಟು | ಪದ್ನಟ್ಟು |
| ಹತ್ತೊಂಭತ್ತು | ಪತ್ತೊಂಬದು | ಪತ್ತೊಂಬಿದಿ | ಇಪ್ಪತ್ತು | ಇರುವದು | ರಡಕಪತ್ತು |
| ಮೂವತ್ತು | ಮುಪ್ಪದು | ಮುಪ್ಪಿದಿ | ನಲವತ್ತು | ನಾಪದು | ನಾಪದಿ |
| ಐವತ್ತು | ಐಂಬದು | ಅಂಜುರಕಾಪತ್ತು | | | |
| ಅರವತ್ತು | ಅರವದು | ಅರ್‍ರ್ರಕಾಪತ್ತು | | | |
| ಎಪ್ಪತ್ತು | ಎಲವದು | ಓಗ್ರಕಾಪತ್ತು | | | |
| ಎಂಭತ್ತು | ಎಂಬದು | ಟ್ರಿಕಾಪತ್ತು | | | |
| ತೊಂಭತ್ತು | ತೊನ್ನೂರು | ಒಂಬದ್ರಿಕಾಪತ್ತು | | | |
| ನೂರು | ನೂರು | ನೂರು | | | |

ಹೀಗೆ ಮೇಲಿನ ಪದಗಳನ್ನು ಗಮನಿಸಿದಾಗ ಕೊರಮ ಭಾಷೆಯು ತಮಿಳು ಮೂಲದ ಭಾಷೆಯಾಗಿರಬೇಕೆನಿಸುತ್ತದೆ.

೯

# ಪ್ರದರ್ಶಕ ಕಲೆಗಳು

**ಮಾ**ನವನು ತನ್ನ ನಿತ್ಯ ಬದುಕಿನ ಜಂಜಡದಿಂದ ಪಾರಾಗಲು ಹತ್ತು ಹಲವು ಉಪಾಯಗಳನ್ನು ಮಾಡುತ್ತಲೇ ಇರುವುದನ್ನು ಕಾಣಬಹುದು. ಪ್ರಾಚೀನ ಮಾನವನ ಜೀವಿತದೊಂದಿಗೆ ವಿಶಿಷ್ಟ ರೂಪವನ್ನು ಪಡೆದುಕೊಂಡು ಬಂದಿರುವ ಜನಪದ ಕಲೆಗಳು ಶ್ರಮದ ಜೊತೆ ಜೊತೆಗೇ ಹುಟ್ಟಿದವುಗಳು. ದುಡಿಯುವ ಮನಸ್ಸಿಗೆ ನೆಮ್ಮದಿ ದೊರಕಿಸಿಕೊಳ್ಳಲು, ಶ್ರಮ ನೀಗಿಸಿಕೊಳ್ಳುವ ಹಿನ್ನೆಲೆಯಲ್ಲಿ ಜನಪದ ಪ್ರದರ್ಶನ ಕಲೆಗಳು ಜನ್ಮ ತಾಳಿದವೇನೋ ಎನಿಸುತ್ತದೆ.

**ಹಚ್ಚೆ**

ಹಚ್ಚೆ ಪದದ ಅರ್ಥ: 'ಹಚ್ಚೆ' ಎಂಬ ಪದ 'ಪಚ್ಚೆ' ಎಂಬ ಪದದಿಂದ ಬಂದದ್ದು. ಪಚ್ಚೆ ಎಂದರೆ ಹಸಿರು ಮಣಿ ಅಥವಾ ರತ್ನ, ಹಸಿರು ಬಣ್ಣ ಮತ್ತು ಹಣೆಯ ಮೇಲಿನ ಸ್ಥಿರವಾದ ತಿಲಕ ಎಂಬ ಅರ್ಥಗಳಿವೆ. ನಮ್ಮ ಚರ್ಮದ ಮೇಲೆ ಶಾಶ್ವತವಾಗಿ ಉಳಿಯುವಂತೆ ಬಣ್ಣದ ಗುರುತನ್ನು ಹಚ್ಚೆಯೆಂದು ಅರಿಯಬಹುದು. ಇದು ಮುತ್ತೈದೆಯರ ಸಂಕೇತ ಎಂದು ಹೇಳುವರು. ಇದನ್ನು ಮಲೆಯಾಳಿ ಭಾಷೆಯಲ್ಲಿ ಪೆಚ್ಚು ಎಂದು ಕರೆಯುತ್ತಾರೆ. ತಮಿಳು ಭಾಷೆಯಲ್ಲಿ ಇದನ್ನು ಪಚ್ಚು, ಪಚ್ಚೆ ಎಂದು ಕರೆಯುವುದುಂಟು. ಮರಾಠಿಯಲ್ಲಿ ಗೊಂದನ್, ತೆಲುಗಿನಲ್ಲಿ ಮಚ್ಚಾ, ತುಳುವಿನಲ್ಲಿ ಕೈಕಾ...., ಕೊಂಕಣಿಯಲ್ಲಿ ಹಚ್ಚಿ ಬಟ್ಟಾ, ಮಲಬಾರಿನ ಗುಡ್ಡಗಾಡು ಜನರಲ್ಲಿ ಪಚ್ಚಕುತ್ತಾ, ಹಿಂದಿ, ಉರ್ದುವಿನಲ್ಲಿ ಗೊಂದನಾ ಎಂದು ಕರೆಯುವರು. 'ಹಚ್ಚೆ' ಎಂದು ಪದಕ್ಕೆ ಕನ್ನಡದಲ್ಲಿ ಬಿದಿರದಬ್ಬೆ ಹೆಂಗಸರ ಮೈಮೇಲೆ ಚುಚ್ಚುವ ಚಿತ್ರ. 'ಹಚ್ಚೆ' ಎಂಬ ಪದಕ್ಕೆ ಇಂಗ್ಲೀಷಿನಲ್ಲಿ ಎಂದು Tattoo ಕರೆಯುತ್ತಾರೆ (ಕಿಟೆಲ್ ಶಬ್ದಕೋಶ, ಪು. ೧೬೨೨). ಈ ಪದ ಪಾಲಿನೋಶಿಯನ್ ಭಾಷೆಯಿಂದ ಬಂದಿದೆ. ಗಿಪಿ ಎಂದರೆ ಹೊಡೆ, ತಟ್ಟು ಎನ್ನುವ ಅರ್ಥವಿದೆ. ಈ ರೂಪವೆ ಹಚ್ಚೆ ಕ್ರಿಯೆಯ ಮೂಲಾರ್ಥವನ್ನು ಸೂಚಿಸುತ್ತದೆ. ಕನ್ನಡದಲ್ಲಿ ಇದು ಹಂಚೆ, ಅಣಚೆ, ಅಂಚಿ, ಅಚ್ಚೆ, ಅಣ್ಚೆ ವಿವಿಧ ಶಬ್ದ ರೂಪದಲ್ಲಿ ಕರೆಯಿಸಿಕೊಳ್ಳುತ್ತಿದ್ದು ಇವೆಲ್ಲ ಹಚ್ಚೆ ಎಂಬ ಪದದಿಂದ ಬಂದಿವೆ. ಹಸಿರು ಬಂದಿದೆ.

ಜನಪದ ವಾಕ್ಯದಲ್ಲಿ ಅಚ್ಚ ಹಸಿರಾಗಿದದೆ ಎಂಬ ಮಾತು ಬರುವುದುಂಟು

ಅಣಚೆ ಎಂಬ ಪದದಲ್ಲಿ ಅಣ್ ಎಂದರೆ ಸಜ್ಜು, ಅಲಂಕರಿಸು ಎಂದರ್ಥ. ಅಣ್ ಎಂದರೆ ಲೇಪಿಸು ಅಥವಾ ಅಂಟು ಎಂಬ ಅರ್ಥ ಇದೆ.

ಹಚ್ಚೆಯ ಉಗಮ

ಸುಮಾರು ಕ್ರಿ.ಪೂ. ೪೫೦೦ರಲ್ಲಿ ಭಾರತ ಮತ್ತು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹಚ್ಚೆಯು ಕಂಡು ಬರುವುದು ಎಂದು ಜೆ ಎಂ ಕೆಂಪಬೆಲ್‌ರವರು ತಿಳಿಸುತ್ತಾರೆ. ಆದಿಮಾನವನ ಮೂಲ ಅವಶ್ಯಕತೆಗಳು ಪ್ರಕೃತಿಯಿಂದ ಪೂರೈಕೆಯಾಗುತ್ತಿದ್ದಂತೆ ಅವನ ಲಕ್ಷ್ಯವು ದೈಹಿಕ ಸುಖ, ಸೌಂದರ್ಯದ ಕಲ್ಪನೆಗೆ ಮರಳಿತು. ಅವುಗಳ ಪೂರೈಕೆಗಾಗಿ ಅವನು ಪುನಃ ಪ್ರಕೃತಿಯನ್ನು ಮೊರೆ ಹೋಗಿರುವುದು ಕಂಡು ಬರುತ್ತದೆ. ಚಿತ್ತಾರಮಯವಾದ ಗಿಡ, ಬಳ್ಳಿ, ಪ್ರಾಣಿ, ಪಕ್ಷಿ ಪ್ರಪಂಚದಿಂದಲೆ ತನ್ನ ಅಲಂಕಾರಕ್ಕೆ ಮೊದಲು ಮಾಡಿದ ಪ್ರಥಮವಾಗಿ ದೇಹಕ್ಕೆ ತಾತ್ಕಾಲಿಕ ಬಣ್ಣಗಳ ಲೇಪನ ಮಾಡಿಕೊಳ್ಳುವುದನ್ನು ಪ್ರಾರಂಭಿಸಿದ. ಅದು ಇಂದಿಗೂ ಮದರಂಗಿಯಂತೆ ಬಣ್ಣಗಳನ್ನು ಬಳಸುವುದನ್ನು ಕಂಡಾಗ ನಿಜವೆನಿಸುವುದು. ಮುಂದೆ ಕೆಲವು ದಿನಗಳಲ್ಲಿ ಅಳಸಿ ಹೋಗುವ ತಾತ್ಕಾಲಿಕ ಬಣ್ಣದಿಂದ ತೃಪ್ತನಾದ, ಶಾಶ್ವತ ಬಣ್ಣಕ್ಕಾಗಿ ತಡಕಾಡಿದ. ಈ ಹಿನ್ನೆಲೆಯಲ್ಲಿ ಹಚ್ಚೆ ಶಾಶ್ವತ ಬಣ್ಣದ ಕಲೆಯಾಗಿ ಉಗಮವಾಗಿರುವಂತಹದು. ಇನ್ನೊಂದು ಅಭಿಪ್ರಾಯದಂತೆ ಗೋಸುಂಬೆ ಹಾಗೂ ಕೆಲವು ಕೀಟಗಳು ಶತ್ರುಗಳಿಂದ ರಕ್ಷಿಸಿಕೊಳ್ಳಲು ತಮ್ಮ ಬಣ್ಣಗಳನ್ನು ಬದಲಿಸಿಕೊಳ್ಳುವಂತೆ ಮನುಷ್ಯ ತನ್ನ ಆಹಾರಕ್ಕಾಗಿ ಕಾಡಿನಲ್ಲಿ ಅಲೆದಾಡುತ್ತಿದ್ದಾಗ ಪ್ರಾಣಿಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಅವುಗಳಂತೆ ಬಣ್ಣದ ಲೇಪನ ಮಾಡಿಕೊಂಡು ಬೇಟೆಯಾಡುವಾಗ ಹಚ್ಚೆ ಕಲೆಯನ್ನು ಕಲಿತನು ಎಂಬ ಊಹೆಯುಂಟು.

ಕರ್ನಾಟಕದಲ್ಲಿ ಇದರ ಬಳಕೆ ಯಾವಾಗ ಪ್ರಾರಂಭವಾಯಿತು ಎಂದು ಹೇಳಲು ಕಷ್ಟ. ಆದರೆ, ಶರಣರ ವಚನಗಳಲ್ಲಿ ಅಲ್ಲಲ್ಲಿ ಬಳಕೆಯಾಗಿರುವ ಅಣಚೆ ಪದವನ್ನು ಗುರುತಿಸಬಹುದು. ಬಸವಣ್ಣನವರ ಈ ಕೆಳಗಿನ ವಚನದಲ್ಲಿ,

ಆಯುಧ ಏಕ್ಕಿದವಂಗೆ ವೀರದ ಮಾತೇಕೆ
ಲಿಂಗವು ಅಂತರಿಸದವಂಗೆ ಒಳನುಡಿ ಏಕೆ
ಐದೆ ಅಣಚೆಯಿಲ್ಲದವಳಿಗೆ ಸೌಭಾಗ್ಯದ ಬೊಟ್ಟೇಕೆ
ಸತ್ಯವಿಲ್ಲದವರಿಗೆ ನಿತ್ಯ ನೇಮವೇಕೆ
ಕರ್ತಾರ, ನಿಮ್ಮ ಒಲವಿಲ್ಲದವಂಗೆ ಶಂಬುವಿನ ನಿಬಂಧುಗಳೇಕೆ
ನೀವಿಲ್ಲದವಂಗೆ ಶಿವಾಚಾರದ ಮಾತೇಕೆ
(ಬಸವಣ್ಣನವರ ವಚನಗಳು, ಡಾ ಎಂ ಎಂ ಕಲಬುರ್ಗಿ, ಪು. ೫೯)

ತತ್ವಮಾತು ಅಂಗಸಂಗಿಗಳಿಗೇಕೆ ಭರ್ಗನ ಸಂಗಭವಿಗೇಕೆ
ಪಚ್ಚೆಯ ಪವಳದ ಗುಡಿ ಗೂಡಾರವೇಕೆ ಗೂಗೆಗೆ
ಗೌಡರ ಮನೆಯ ತೊತ್ತಿಂಗೇಕೆ ಬಲ್ಲಹನಾಣೆ
(ಚೆನ್ನಬಸವಣ್ಣನವರ ವಚನಗಳು, ಡಾ ಆರ್ ಸಿ ಹಿರೇಮಠ, ಪು. ೨೦೦)

ಬಸವಣ್ಣನವರು ಇನ್ನೊಂದೆಡೆಯಲ್ಲಿ ಹಚ್ಚೆ ಹಾಕಿಸಿಕೊಂಡ ಹರಭಕ್ತೆಯ ಕೈಯಿಂದ ಕೊಂಬ ಪ್ರಸಾದ ಪ್ರಸಾದವಲ್ಲ, ಅದು ನರಮಾಂಸ ಹೆಂಡ ಹಾಗೂ ನಾಯಿ ರಕ್ತಕ್ಕೆ ಸಮಾನ ಎಂಬ ಟೀಕೆ ಮಾಡಿದ್ದಾರೆ. ಅಲ್ಲದೆ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಅಣಚಿತನವಂ ಕೈಕೊಳ್ ನಿನ್ನೊಲೆ ಭಾಗ್ಯದ ಭದ್ರ ಲಕ್ಷಣದ ಸುದೊಳ್ ಸಂಧೀ ಸೌಭಾಗ್ಯದಿಂದ ಸ್ವಜನಂಗಳು ಎಸೂಕ್ತಿ ಸುಧಾರ್ಣವ, (ಎನ್ ಅನಂತರಂಗಾಚಾರ್ಯ, ಪು. ೧೧೨, ಕ.ಅ.ಸಂ, ಮೈ, ೧೯೭೭) ಎಂಬ ಮಾತು ಬಂದಿದೆ. ಇಂತಹ ಉಲ್ಲೇಖಗಳಿಂದ ೧೨ನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಹಚ್ಚೆಯ ಕಲೆ ಪ್ರಚಲಿತ ದಲ್ಲಿತ್ತೆಂದು ತಿಳಿದುಬರುತ್ತದೆ.

### ಹಚ್ಚೆ ಹಾಕುವ ಸಾಮಗ್ರಿಗಳು

ಹಚ್ಚೆಗೆ ಒಂದು ಮಸಿ ಕುಡಿಕೆ, ಬಿದಿರಿನ ನಳಿಕೆ ಮತ್ತು ಸೂಜಿಗಳನ್ನು ಬಳಸುವರು. ಸೂಜಿಗಳನ್ನು, ಮೂರು, ಐದು ಏಳು, ಒಂಬತ್ತು ಹೀಗೆ ಗುಂಪುಗಳಾಗಿ ಕಟ್ಟುವರು. ಒಟ್ಟಿನ ದುಂಡನೆಯ ಸ್ವರೂಪದಲ್ಲಿ ಕಟ್ಟಿದರೆ, ಮೂರು ಸೂಜ್ಜಿಯ ಕಟ್ಟನ್ನು ಚಾಚಣಿಕೆಯ ರೂಪದಲ್ಲಿ ಕಟ್ಟುವರು. ಒಂಬತ್ತು ಸೂಜಿಯ ಕಟ್ಟನ್ನು ದುಂಡನೆಯ ಸ್ವರೂಪದಲ್ಲಿಯೆ ಕಟ್ಟುವರು. ಮಸಿ ಕುಡಿಕೆಯನ್ನು, ಮಣ್ಣಿನಿಂದ ತಯಾರಿಸುತ್ತಾರೆ. ಅದಕ್ಕೆ ಮುಚ್ಚಲು ಅರಿವೆಯ ಗೋಡೆಯನ್ನು ಮಾಡಿರುತ್ತಾರೆ. ಹಚ್ಚೆ ಹಾಕುವ ಪೂರ್ವದಲ್ಲಿ ಬಿದಿರಿನ ಸೀಳಿಕೆಗಳಿಂದ ಹಾಕಬೇಕಾದ ಹಚ್ಚೆಯ ಹಚ್ಚಿ ತೆಗೆಯುವರು.

ಹಚ್ಚೆ ಹಾಕುವ ಸಾಮಗ್ರಿಗಳು



**ಬಣ್ಣ ತಯಾರಿಕೆ**

ಹಚ್ಚೆಗೆ ಬಳಸುವ ಬಣ್ಣ ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನ ರೀತಿಯಲ್ಲಿರುತ್ತದೆ. ಆದರೆ ಎಲ್ಲ ಪ್ರದೇಶಗಳಲ್ಲಿ ಈ ಬಣ್ಣವನ್ನು ಗಿಡಮೂಲಿಕೆಗಳಿಂದಲೆ ತಯಾರಿಸುವರು. ಇದರ ಹಿಂದೆ ಎರಡು ಉದ್ದೇಶವಿರುವುದುಂಟು. ತಾವು ಮೂಡಿಸಿದ ಬಣ್ಣ ಶಾಶ್ವತವಾಗಿ ಮೂಡಬೇಕು, ಅಳಿಸಬಾರದು ಎಂಬುದು ಒಂದು ಉದ್ದೇಶವಾದರೆ, ಇನ್ನೊಂದು ಹಚ್ಚೆ ಹಾಕಿಸಿಕೊಂಡ ವ್ಯಕ್ತಿಗೆ ನೋವಾಗಬಾರದು ಬೇಗ ಗುಣವಾಗಬೇಕು ಎಂಬುದು ಇನ್ನೊಂದು ಉದ್ದೇಶ. ಉತ್ತರ ಕರ್ನಾಟಕದಲ್ಲಿ ದೀಪದ ಕಾಡಿಗೆ ಅಥವಾ ರೊಟ್ಟಿಹಂಚಿನ ಮಸಿಯನ್ನು ಔಡಲ ಎಣ್ಣೆಯನ್ನು ನೆನಸಿ ಅದಕ್ಕೆ ಸ್ವಲ್ಪ ಅರಿಷಿಣ ಸೇರಿಸಿ ತಯಾರಿಸುವರು. ಅಲ್ಲದೆ ಅಳಲೆಕಾಯಿ, ವಿಳ್ಯದೆಲೆ ರಸ; ತೊಂಡಿಸೊಪ್ಪು ಸಣ್ಣಗೆ ಅರೆದು ಅರಿಷಿಣದಲ್ಲಿ ಕಲಿಸಿ, ಔಡಲ ಎಣ್ಣೆಯಲ್ಲಿ ನೆನಸಿ ಹಚ್ಚುವರು

ದಕ್ಷಿಣ ಕರ್ನಾಟಕದಲ್ಲಿ ಅವರೇ ಸೊಪ್ಪನ್ನು ರೊಟ್ಟಿ ಹಂಚಿನಲ್ಲಿ ಹುರಿದು ಶಿಕ್ಕಿ ಹರಳೆಣ್ಣೆ ದೀಪಕ್ಕೆ ಹಿಡಿದು ಅದರಿಂದ ಬಂದ ಕಾಡಿಗೆಗೆ ನೀರು ಸೇರಿಸಿ ಬಣ್ಣ ತಯಾರಿಸುವರು. ಅಲ್ಲದೆ ವಿಳ್ಯೇದೆಲೆ ರಸವನ್ನು ಹಂಚಿನ ಮೇಲೆ ಸವರಿ ಹರಳೆಣ್ಣೆ ದೀಪಕ್ಕೆ ಹಿಡಿದು ತಯಾರಿಸುವರು. ಇದಕ್ಕೆ ಎದೆಹಾಲನ್ನು ಅಥವಾ ಆಕಳ ಹಾಲನ್ನು ಬೆರೆಸುವರು ಇದ್ದಿಲನ್ನು, ನುಣಪಾಗಿ ಪುಡಿಮಾಡಿ ಹಚ್ಚೆ ಸೊಪ್ಪಿನ ರಸವನ್ನು ಬೆರೆಸಿ ತಯಾರಿಸುವರು. ಹಾಗಲಸೊಪ್ಪು ಅಥವಾ ಚಪ್ಪರದ ಅವರೆ ಸೊಪ್ಪು ಅರೆದು ರಸ ತೆಗೆದು ಮಡಿಕೆಯಲ್ಲಿ ಹಾಕಿ ಸ್ವಲ್ಪ ಬೆಚ್ಚಗೆ ಮಾಡಿ ಲೋಳೆಯಾಕಾರದ ರಸ ತಯಾರಿಸುವುದು. ಉಳಿಚಿಕ್ಕ ಅಥವಾ ಕಿರುವಳಿ ಸೊಪ್ಪಿನ ರಸಕ್ಕೆ ಅಥವಾ ನೆಲ್ಲಿಸೊಪ್ಪಿನ ರಸಕ್ಕೆ ಎಳ್ಳೆಣ್ಣೇ ದೀಪದ ಕಾಡಿಗೆ ಸೇರಿಸಿ ತಯಾರಿಸುವರು. ನೆಲ್ಲವರೆ ರಸಕ್ಕೆ ತುಪ್ಪ ಮತ್ತು ದೀಪದ ಕಾಡಿಗೆ ಸೇರಿಸುವರು. ವಿಳ್ಯೇದಲೆ ರಸ ಮತ್ತು ಹಸುವಿನ ಸಗಣಿಯನ್ನು ಹಂಚಿನ ಮೇಲೆ ರಡಿ ಹರಳೆಣ್ಣೆಯ ದೀಪದ ಕಾಡಿಗೆಯನ್ನು ಸೇರಿಸಿ ಮಡಿಕೆಯಲ್ಲಿ ಹಾಕಿ ಅದರಲ್ಲಿ ಸ್ವಲ್ಪ ತಣ್ಣನೆಯ ನೀರು ಹಾಕಿ ಕಲಿಸುವರು

ತುಂಬಿಸೊಪ್ಪಿನ ರಸಕ್ಕೆ ಮೊಲೆಹಾಲು ಮತ್ತು ಕೊಬ್ಬರಿ ಎಣ್ಣೆ ಬೆರೆಸಿ ತಯಾರಿಸುವರು. ಒರಗರಸೊಪ್ಪಿನ ರಸ, ಹಚ್ಚೆ ಸೊಪ್ಪಿನ ರಸ ಅಥವಾ ಹೊನಗನಸೊಪಿನ ರಸ ಮಡಿಕೆಯಲ್ಲಿ ಸಂಗ್ರಹಿಸಿ ಮೊಲೆ ಹಾಲು ಸೇರಿಸಿ ತಯಾರಿಸುವರು

ರೊಟ್ಟಿ ಹಂಚಿನ ಕಾಡಿಗೆಗೆ ಎದೆ ಹಾಲು ಬೆರಸಿ ತಯಾರಿಸುವರು. ಬೀಟೆ ಮರದ ತೊಗಟೆ ಮತ್ತು ಮರದ ಎಲೆ ರಸಕ್ಕೆ ದೀಪದ ಕಪ್ಪನ್ನು ಹಾಕಿ ಈ ಬಣ್ಣ ತಯಾರಿಸುವರು. ಶಿವಮೊಗ್ಗ ವಿಭಾಗದಲ್ಲಿ ಕಾಚು, ಅಳಲೆ ಕಾಯಿ, ವಿಳ್ಯದೆಲೆಯನ್ನು ಸುಟ್ಟು ಕರಿ ಮಾಡಿ ನಂತರ ಚಿಮಣಿ ಬುಡ್ಡಿಯ ಕಪ್ಪನ್ನು ಸೇರಿಸಿ ತಯಾರಿಸುವರು

**ಹಚ್ಚೆ ಹಾಕುವ ರೀತಿ**

ಇವರು ಊರಿನಲ್ಲಿ ಓಣಿ ಓಣಿ ಸುತ್ತುತ್ತ, ಹಚ್ಚೆ ಹಾಕಿಸಿಕೊಳ್ಳುತ್ತಿರೇನ್ ತಾಯಿ

ಎಂದು ಕೇಳುತ್ತ, ಇಲ್ಲವೆ ದೊಡ್ಡ ದೊಡ್ಡ ಮನೆ ನೋಡಿ ಯವ್ವ ಹಚ್ಚೆ ಹಾಕಾಕ ಬಂದೀನಿ ಎಂದು ಹೇಳಿ ಬಾಗಿಲಲ್ಲಿ ನಿಲ್ಲುವರು. ಕೆಲವು ಸಲ ಹಚ್ಚೆ ಹಾಕಿಸಿಕೊಳ್ಳುವ ಬಯಕೆ ಇರುವವರು ಇವರನ್ನು ಕರೆಯುವರು, ಯಾವ ಯಾವ ಬಗೆಯ ಹಚ್ಚೆ ಹಾಕಲು ಬರುತ್ತದೆ ಎಂದು ವಿಚಾರಿಸುವರು. ಅವುಗಳನ್ನು ಇವರು ಚೇಳು, ರಾಮನ ದಂಡೆ, ಗೌರಿ ದಂಡೆ, ಪುಗಡಿ ಬಜಾರ ಎಂದು ಹೇಳಿದರೆ, ಉತ್ತರ ಕರ್ನಾಟಕದಲ್ಲಿ ಹುಬ್ಬಳ್ಳಿ ಬಜಾರ, ಬಳ್ಳಾರಿ ವಿಭಾಗದಲ್ಲಿ ಹಂಪಿ ತೇರು ಎಂದು, ದಕ್ಷಿಣ ಕರ್ನಾಟಕದಲ್ಲಿ ಮೈಸೂರು ಬಜಾರ ಎಂದು ಇತ್ಯಾದಿಯಾಗಿ ಹೆಸರಿಸುವರು. ಆಗ ಸಣ್ಣ ಬಿದಿರಿನ ಕಡ್ಡಿಯಿಂದ ಮಸಿ ಅದ್ದಿ, ಅವರಿಗೆ ಬೇಕಾದ ಚಿತ್ರವನ್ನು ಅವರ ಕೈಗಳ ಮೇಲೆ ಚಿತ್ರಿಸಿ ತೋರಿಸುವರು. ಅವರು ಒಪ್ಪಿಗೆ ಸೂಚಿಸಲು ಇವರು ಹಚ್ಚೆ ಹಾಕಲು ಚಿತ್ರದ ಮೇಲೆ ಸೂಜಿಯನ್ನು ಹಿಡಿದು ಮುಂದಾಗುವರು. ಸಣ್ಣ ಚಿತ್ರವಿದ್ದರೆ ಮೂರು ಸೂಜಿಯಿಂದ ದೊಡ್ಡ ಚಿತ್ರವಿದ್ದರೆ ಐದು ಸೂಜಿಯಿಂದ ಚುಚ್ಚಲು ತೊಡಗುವರು. ಆ ಸೂಜಿಯನ್ನು ಬಾಗಿದಂತೆ ಹಿಡಿಯುವುದು ರೂಢಿ, ಚುಚ್ಚುವಾಗ ಆಗಾಗ ಮಸಿಕುಡಿಕೆಯಲ್ಲಿ ಅದ್ದುವರು. ಹೀಗೆ ಚುಚ್ಚುವಾಗ ಕೆಲವರಿಗೆ ರಕ್ತ ಬರುವುದು. ಇನ್ನು ಕೆಲವರಿಗೆ ರಕ್ತ ಬರುವುದಿಲ್ಲ. ಚುಚ್ಚುವಾಗ ನೋವಾಗುತ್ತಿದ್ದರೆ ಅದನ್ನು ಮರೆಸಲು, ಲಕ್ಷ್ಯವನ್ನು ಬೇರೆ ಕಡೆ ಸೆಳೆಯಲು ಹಾಡು ಹೇಳುವುದನ್ನು ರೂಢಿಸಿಕೊಂಡಿದ್ದಾರೆ. ಹಚ್ಚೆ ಹಾಕಿಸಿಕೊಳ್ಳುವರು ಮಕ್ಕಳಾಗಿದ್ದರೆ ನಗುವ ಹಾಡನ್ನು ಹಾಸ್ಯಭರಿತವಾಗಿ ಹೇಳುವರು. ಸಾಮಾನ್ಯವಾಗಿ ಹೆಂಗಸರಿಗೆ ಹಚ್ಚೆ ಹಾಕುವಾಗ ನೈತಿಕವಾದ ಹಾಡುಗಳನ್ನು ಹೇಳುವರು. ಈ ಹಾಡುಗಳನ್ನು ಹೇಳುವವರು ಹಚ್ಚೆ ಹಾಕುವವರೇ ಆಗಿರುತ್ತಾರೆ. ಸೂಜಿಯು ನಟ್ಟಿರುವಲ್ಲಿ ಚರ್ಮದ ಆಳದಲ್ಲಿ ಮಸಿ ಇಳಿದಿರುವುದು ಕಂಡು ಬರುತ್ತದೆ. ನಂತರದಲ್ಲಿ ಇದಕ್ಕೆ ಕೊಬ್ಬರಿ ಎಣ್ಣೆ ಹಚ್ಚಿದರೆ, ಇನ್ನು ಕೆಲವರು ನೋವಿನ ಉಪಶಮನಕ್ಕಾಗಿ ಅರಿಷಿಣ ಕೊಂಬನ್ನು ತೇದು ಹಚ್ಚಿಕೊಳ್ಳಲು ಹೇಳುವರು. ಇದರಿಂದ ಹಚ್ಚೆ ಎದ್ದು ಕಾಣುತ್ತದೆ.

**ಹಚ್ಚೆ ಹಾಕಿಸಿಕೊಂಡವರು ವಹಿಸಬೇಕಾದ ಎಚ್ಚರಿಕೆಯ ಕ್ರಮಗಳು**

ಹಚ್ಚೆ ಹಾಕಿಸಿಕೊಂಡವರು ಮೂರು ದಿನಗಳವರೆಗೆ ಹಸಿ ಅರಿಷಿಣ ಹಾಗೂ ಕಾದ ಕೊಬ್ಬರಿ ಎಣ್ಣೆಯನ್ನು ಕಲಿಸಿಕೊಂಡು ರಾತ್ರಿ ಮಲಗುವ ಸಮಯದಲ್ಲಿ ಹಚ್ಚಿಕೊಳ್ಳ ಬೇಕೆಂದು ಹೇಳುತ್ತಾರೆ.

ಚರ್ಮ ಹೆಕ್ಕಳಿಗಟ್ಟಿದಾಗ ಉಗುರಿನಿಂದ ಕೀಳಬಾರದು. ಹಚ್ಚೆ ಹಾಕಿಸಿಕೊಂಡಾಗ ನಂಜಿನ ಪದಾರ್ಥಗಳಾದ ಬದನೆಕಾಯಿ, ಹಸಿಮೆಣಸಿನಕಾಯಿ, ಇಂಗು, ಗೆಣಸು, ಗಿಣ್ಣು, ಪಪ್ಪಲಿಸು ತಿನ್ನಬಾರದು ಎಂದು ಹೇಳುವರು.

ಹಚ್ಚೆಯನ್ನು ಕೆಲವು ನರಗಳ ಮೇಲೆ ಹಾಕಲ್ಪಟ್ಟಿರುವುದರಿಂದ ಸದಾ ಕೆಲಸ ಮಾಡಲು ಹೇಳುವರು. ಈ ಕೆಲಸ ಮಾಡುವುದರಿಂದ ನರಗಳು ಸಡಿಲಗೊಳ್ಳುವವು. ಇಲ್ಲವಾದರೆ ಗಂಡಾಗುವವು. ಅಲ್ಲದೆ ಚಿಕ್ಕ ವಯಸ್ಸಿನಲ್ಲಿ ಹಚ್ಚೆ ಹಾಕಿಸಿಕೊಳ್ಳಲು


ಎಡಗೈ ಹಿಂಭಾಗ
ಎಡಗೈ ಮುಂಭಾಗ
ಧೂಪಾರತಿ
ಜರಡಿ
ಮುತ್ತಿನ ಜರಡಿ
ಶಿವನ ಗುಡಿ
ಗುಡಿ
ತೋರಣ
ಮುತ್ತೈದೆಯರು


ದುಂಡುಮಲ್ಲಿಗೆ
ಬೊಟ್ಟು
ಜೇಡರಬಲೆ
ನವಿಲುಗರಿ
ಜರಡಿ
ಕಮಲ

ಪಾದಗಳ ಹಚ್ಚೆ ಚಿತ್ರ

ಹನುಮಪ್ಪನ ತೇರು
ಮೀನು
ಗದೆ
ಅಂಗು
ಕೊಡೆ ಹೂ
ನಾಗರ ಹೆಡೆ
ಸೂರ್ಯ
ಚೇಳ

ಚಕ್ರ
ಹಂಪಿ ತೇರು
ಏಣಿ
ಬಾವಿಯ ಮೆಟ್ಟಿಲು
ರಾಮನ ಬಾಣ
ಹೊನ್ನೆ ಗಿಡ
ಚೇಳಿನ ಕೊಂಡಿ

ಪುರುಷರ ಕೈಗಳ ಮೇಲಿನ ಹಚ್ಚೆ ಚಿತ್ರ

ಬಲಗೈ ಹಿಂಭಾಗ
ಹನುಮಪ್ಪ
ಜೋಳ ಚಪ್ಪರ
ಚೇಳ
ಜಡೆ
ಆಯಗಾಲಿಯ ತೇರು
ಶಿವನ ಬಾಸಿಂಗ
ಗೆಳತಿಯರು
ಚೇಳು

ಬಲಗೈ ಮುಂಭಾಗ
ತೇರು
ಗಿಡಗಳ ಸಾಲು
ಹೂ
ಶಂಖ
ಹುಲಿ ಉಗುರು
ಗಿಡದ ದೇಟು

ಸ್ತ್ರೀಯರ ಕೈಗಳ ಮೇಲಿನ ಹಚ್ಚೆ ಚಿತ್ರ

ಹೇಳುವರು. ಯುವತಿಯರು ಹಾಸಿಗೆ ಪತ್ಯೆ ಮಾಡಬೇಕು ಇಲ್ಲವಾದರೆ ನಂಜಾಗುವ ಸಂಭವಿರುತ್ತದೆ ಎನ್ನುತ್ತಾರೆ

**ಸಮಾಜದಲ್ಲಿ ಹಚ್ಚೆ ಹಾಕುವವರ ಸ್ಥಾನಮಾನ**

ಹಚ್ಚೆ ಹಾಕುವ ಕೊರಮ ಹೆಂಗಸರು ಹೆಚ್ಚು ಮಾತಿನ ಕಲೆಯನ್ನು ಹೊಂದಿರುತ್ತಾರೆ. ಇವರು ಹಚ್ಚೆ ಹಾಕುವ ಸಂದರ್ಭದಲ್ಲಿ ಹಾಡುವ ಹಾಡುಗಳು ಹಾಸ್ಯಭರಿತವಾಗಿ ವೈವಿಧ್ಯತೆಯಿಂದ ಕೂಡಿರುತ್ತವೆ. ಇವುಗಳಿಗೆ ನಿಶ್ಚಿತವಾದ ಧಾಟಿ ಇರುವುದಿಲ್ಲ.

**ಹಚ್ಚೆ ಹಾಕಿಸಿಕೊಳ್ಳುವ ಭಾಗಗಳು ಮತ್ತು ಪ್ರಕಾರಗಳು**

ಹಣೆ ಬೊಟ್ಟು, ದೃಷ್ಟಿ ಬೊಟ್ಟು, ಹೂವು, ಚಂದ್ರ, ಸೂರ್ಯ, ನಕ್ಷತ್ರ, ಕಮಲ, ಒಂದುಗೆರೆ, ಶಂಖ. ಮೆಲುಕು, ಕಣ್ಣು ಶಾವಿಗೆ, ಚುಕ್ಕೆ, ಗಲ್ಲದ ಮೇಲೆ ಸಣ್ಣ ಸಣ್ಣ ಮೂರು ಚಿಕ್ಕೆಗಳು. ತೋಳಿನ ಮೇಲೆ ಮುತ್ತಿನ ಬೊಟ್ಟು, ಸೀತೆ ಸೆರಗು, ತೋಳು ಚಪ್ಪರ, ಮುತ್ತಿನ ಬಳ್ಳಿ, ಮುತ್ತಿನ ಮೆಲುಕು, ಅರಣ್ಯದ ಚಿತ್ರ, ಬಲ ಮೊಣಕೈಗೆ ಬಾಳೆಗಿಡ, ಮುತ್ತಿನ ಆರತಿ, ಜೋಗಿ ಜಡೆ, ಹನುಮಪ್ಪ, ಸೀತೆ ಸೆರಗು, ನಾಗಪ್ಪ, ರಾಮನ ತೊಟ್ಟಿಲು ಇತ್ಯಾದಿ. ಎಡ ಮೊಳಕೈಗೆ ಗೌರಿಗದ್ದಿಗೆ, ಜೋಗಿ ಜಡೆ, ತಾವರೆ ಹೂವು, ಗಾಲಿತೇರು, ಶಿವನ ಭಾಸಿಂಗ. ಮೂಗುತಿ ಮುತ್ರ, ಚುಕ್ಕೆ, ಏಳು ಚಿಕ್ಕೆಗಳಿರುವ ಮೂಗತಿ ಗಂಡ ಅಥವಾ ಹೆಂಡತಿಯ ಹೆಸರು, ಗೆಳೆಯ ಅಥವಾ ಗೆಳತಿಯ ಹೆಸರು, ಅಜ್ಜ, ಅಪ್ಪ ಮತ್ತು ಅಮ್ಮ ಇತರರ ಹೆಸರುಗಳನ್ನು ಚಿತ್ರಿಸುವರು. ಹೆಬ್ಬೆರಳಿಗೆ ಚೇಳು, ನೊಣ, ವಾಲಿಗುಪ್ತಿ, ಹುಲಿಯುಗುರು, ಇತ್ಯಾದಿ ಚಿತ್ರಗಳು.ಸಾಲು ನವಿಲು, ಸಣ್ಣ ವೃತ್ತದ ಚಿತ್ರ. ಕಾಲಿನ ಮೇಲ್ಭಾಗ ಕಮಲದ ಹೂ. ಬೆನ್ನಿನ ಮೂಳೆಯ ಮೇಲ್ಭಾಗ ಸಣ್ಣ ಚುಕ್ಕೆಗಳು ಇತ್ಯಾದಿ ಹಚ್ಚೆಯ ರೂಪದಲ್ಲಿ ಹಾಕುವುದನ್ನು ಕಾಣಬಹುದು.

ನಂಬಿಕೆಗಳು

* ಹಚ್ಚೆಯನ್ನು ಹೆಣ್ಣು ಮಕ್ಕಳಿಗೆ ಐದರಿಂದ ಹದಿನಾಲ್ಕು ವರ್ಷದೊಳಗೆ ಹಾಕಬೇಕು. ಅದು ಹಿಂದೂಗಳ ಸಂಕೇತವೆನ್ನುವರು.
* ಮಕ್ಕಳು ದಕ್ಕದಿದ್ದರೆ ಮಕ್ಕಳು ದಕ್ಕುವಂತೆ ಹೊಟ್ಟೆಯ ಮೇಲೆ ಒಂದೆರಡು ಮುಳ್ಳು ಹಾಕಿಸಿಕೊಳ್ಳಬೇಕೆನ್ನುವ ನಂಬಿಕೆ ಕೊರಮರಲ್ಲಿದೆ.
* ಕೈಗೆ ಹಚ್ಚೆ ಹಾಕಿಸಿಕೊಡರೆ ಚೇಳು ಹಾವುಗಳ ವಿಷವೇರಿ ನಂಜಾಗದಂತೆ ತಡೆಯುವುದು.
* ಹಚ್ಚೆ ಹಾಕಿಸಿಕೊಂಡ ಕೈಯಿಂದ ಅಡಿಗೆ ಮಾಡಿದರೆ ಕೆಡುವುದಿಲ್ಲ.
* ರಾಸಿ ತುಂಬುವಾಗ ಹಚ್ಚೆ ಇದ್ದವರು ತುಂಬಿದರೆ ಸಮೃದ್ಧಿಯಾಗುವುದು.
* ಅದೃಷ್ಟ ದೇವತೆಯು ಸಂಪ್ರೀತಳಾಗುವಳು ಎಂಬ ನಂಬಿಕೆ ಇವರಲ್ಲಿದೆ
* ದೃಷ್ಟಿ ತಾಗದಿರಲೆಂದು, ರೋಗ ಬಾರದಿರಲೆಂದು, ಭೂತ ಪ್ರೇತಗಳ ಕಾಟ ಬರಬಾರದೆಂದು ಹಚ್ಚೆ ಹಾಕಿಸಿಕೊಳ್ಳುವರು ಹಾಗೂ ತಲೆಶೂಲೆ, ವಾತ ರೋಗ

ನಿವಾರಣೆಗೆ ಹಣೆ ಮತ್ತು ನರಗಳ ಮೇಲೆ ಹಾಗೂ ಕಾಲು ತೋಳಿನ ಸಂದುಗಳಿಗೆ ಹಚ್ಚೆ ಹಾಕಿಸಿಕೊಳ್ಳಬೇಕೆಂದು ತಿಳಿಸುತ್ತಾರೆ.

* ಹನುಮಂತನ ಹಚ್ಚೆ ಹಾಕಿಸಿಕೊಂಡರೆ ಗಟ್ಟಿಗನಾಗುತ್ತಾನೆ ಎಂಬ ನಂಬಿಕೆಯುಂಟು.
* ಗುರುವಾರ, ರವಿವಾರ ಸಂಧು ನೋವಿಗೆ ಹಚ್ಚೆ ಹಾಕಿಸಿಕೊಳ್ಳಬೇಕು. ಹುಟ್ಟಿದ ಮಗು ಉಳಿಯಲು ಹೊಟ್ಟೆಯ ಪಕ್ಕದಲ್ಲಿ ಹಚ್ಚೆ ಹಾಕ್ಸಿಕೊಳ್ಳಬೇಕೆಂದು ಹೇಳುತ್ತಾರೆ.
* ಹಾವು ಚೇಳುಗಳು ಆಗಾಗ ಕಾಣುವುದರಿಂದ ಕೈಬೆರಳುಗಳ ಮಲೆ ಅವುಗಳ ಹಚ್ಚೆ ಹಾಕಿಸಿಕೊಂಡರೆ ಭಯ ಬರುವುದಿಲ್ಲ ಎಂಬುದು ಮುತ್ತೈದೆತನಕ್ಕೆ ಗೋದಿ ಕಾಳು, ಬಾಸಿಂಗ ಹಾಕಿಸಿಕೊಳ್ಳುವರು. ತನ್ನ ಕೆಲಸವಾದರೆ ಇಂತಹ ಚಿತ್ರ ಹಾಕಿಸಿ ಕೊಳ್ಳುತ್ತೇನೆ ಎಂದು ದೇವರ ಹರಕೆ ಹೊರುವವರು ಇದ್ದಾರೆ ಹಚ್ಚೆಯ ಕಾಯಕದಿಂದ ಕೊರಮರ ಹೆಂಗಸರು ಜೀವನ ನಿರ್ವಹಣೆ ಮಾಡುತ್ತಿದ್ದರು. ಇಂದು ಹಚ್ಚೆ ಹಾಕಿಸಿ ಕೊಳ್ಳುವವರು ಕಡಿಮೆ ಆಗುತ್ತಿದ್ದಾರೆ. ಅದರ ಬಗೆಗಿನ ಒಲವು ಕಡಿಮೆಯಾಗಿದೆ. ಸಾಂಸ್ಕೃತಿಕ ಮೌಲ್ಯಗಳು ಮರೆಯಾಗುತ್ತಿವೆ. ಈಗ ಈ ಕಲಾಕಾರರಿಗೆ ಕೆಲಸವಿಲ್ಲ ದಂತಾಗಿದೆ.

ಹಚ್ಚೆಯ ಕುರಿತು ಕೆಲವು ಒಗಟುಗಳು ಹುಟ್ಟಿಕೊಂಡಿವೆ ಎಂಬುದಕ್ಕೆ

ಬಿತ್ತಿದ ಬೆಳೆ ಕಿತ್ತಲಾರ
ಸುಣ್ಣದ ಗಡಗಿ ಸುತ್ತಲಾರ (ಹಚ್ಚೆ)
ಕಣ್ಣಿಗೆ ಕಾಣ್ತದ ಕೈಗೆ ಸಿಗುವುದಿಲ್ಲ (ಹಚ್ಚೆ)
ಹಚ್ಚಿದ ಕುಳ್ಳು ಕಿತ್ತುವುದಿಲ್ಲ (ಹಚ್ಚೆ)
ಅಕ್ಕನ ಕೈಗೆ ಪಚ್ಚೆ ಕಡಗ ಹಾಕುವವರುಂಟು ತರುವವರು ಇಲ್ಲಾ (ಹಚ್ಚೆ)
ಅಣ್ಣಯ್ಯನ ತೋಟಕ್ಕೆ ಎಪ್ಪತ್ತೈದು ಬೀಗ
ಅತ್ತೂ ಬರದು ಕಿತ್ತೂ ಬರದು (ಹಚ್ಚೆ)
ಚಿಕ್ಕ ಪೆಟ್ಟಿಗೆ ಚೀನಾಲಿ ಪೆಟ್ಟಿಗೆ
ಮಕ್ಕಳ ಕಂಡರೆ ಅಳಿಸುವ ಪೆಟ್ಟಿಗೆ (ಹಚ್ಚೆ )
ಮಾರುದ್ದ ಮರಕ್ಕೆ ನಿಮ್ಮಪ್ಪನೂ ಹತ್ತಲಾರ
ನಮ್ಮಪ್ಪನೂ ಹತ್ತಲಾರ (ಹಚ್ಚೆ)
ಅಂತಪ್ಪನ ಹಿತ್ತಲ್ದಾಗ ಅಂತ್ರಾಣಿ ಗಿಡ ಹುಟ್ಟೈತಿ
ಅತ್ತರೂ ಬರುವೊಲ್ಟು ಕಿತ್ರೂ ಬರವೊಲ್ಟು, ಹಾಕಾಕ ಬರತೈತೆ ತೆಗ್ಯಾಕ ಬರುವುದಿಲ್ಲ (ಹಚ್ಚೆ)
ಅಲಕ ಮಲಕು ಚಿಲಕ ಚಿತ್ತಾರ ಹಾಕಲು ಬರ್ತದ್,
ತೆಗ್ಯಾಕ ಬರಲ್ಲಾ (ಹಚ್ಚೆ)
ಹಚ್ಚಿದ ಕುಳ್ಳು ಕಿತ್ತೋದಿಲ್ಲ ಹಚ್ಚು ಮುಂದೇ ನಗೋದಿಲ್ಲ (ಹಚ್ಚೆ)
ಸೋಲ್ಲಾಪುರದ ಬಿಜಾ ಬಿತ್ತಾಕ ಬರ್ತದ್
ಕಿತ್ತಾಕ ಬರಲ್ಲಾ (ಹಚ್ಚೆ)

ಎತ್ರಾಸದ್ ಮೇಲೆ ಉತ್ರಾಣಿ ಗಿಡ ಹುಟ್ಟಿದರೆ,
ಕಿತ್ರೂ ಬರಲ್ಲ ಕೀರಾಡಿದರೂ ಬರಲ್ಲ (ಹಚ್ಚೆ)

**ಹಚ್ಚೆಪದಗಳು**

೧, ಅಡವೂರ ದಾರಿಯಲಿ ಗಿಡವೆಲ್ಲಮಲ್ಲೀಗೆ
ಕಿಡಿಕಿಡಿ ನೆಂಬೊ ಕಿರಿಯಣ್ಣನಾರಿ
ಕಿಡಿ ಕಿಡಿ ನೀ ನೆಂಬೊ ಕಿರಿಯಣ್ಣನ ಕಂಡರೆ
ಕಿಡಿ ಕಿಡಿ ಎಂದೂ ಹೆದರುವ ನಾರಿ
ಕಡೂರು ದಾರಿಯಲಿ ಗಿಡವೆಲ್ಲ ಮಲ್ಲೀಗೆ
ಕಿಡಿ ಕಿಡಿ ನೆಂಬೊ ಕಿರಿಯಣ್ಣ ನಾರಿ

ಹಚ್ಚೆ ಹೊಯ್ಯೋಣ ಬಾರೆ ನಿನ್ನ
ಬಲಗೈಯ ತೋಳಿನ ಮೇಲೆ
ಹಚ್ಚೆ ಮೇಲಿರುವ ಬಸವನ ನಾರಿ
ಹಚ್ಚೆ ಮೇಲಿರುವ ಬಸವನ ನಾರಿ
ಹಚ್ಚೇನು ಕುಕ್ಕಿಸಿಕೊಳ್ಳುವುದೇ ನಿನ್ನ ಬಲ ನಾರಿ
ಬಂಡಿಹೂಡೇನು ಬಾರೆ ನಿನ್ನ ಬಲಗೈತೋಳಿನ ಮೇಲೆ

ಬಂಡಿಮೇಲಿರುವ ಬಸವನ ನಾರಿ
ಬಂಡಿ ಮೇಲಿರುವ ಬಸವನ ನಾರಿ
ಕುಕ್ಕಸಿಕೊಳ್ಳುವುದೇ ನಿನ್ನ ಬಲ ನಾರಿ
ಬಂಡಿಮೇಲಿರುವ ಬಸವನ ಹೂಡೇನು
ಕುಕ್ಕಿಸಿಕೊಳ್ಳುವುದೇ ನಿನ್ನ ಬಲನಾರಿ

ಸಣ್ಣಸೀರೆ ಉಟ್ಟುಹೊನ್ನಮಡಲೀಗಿಟ್ಟು
ನಮ್ಮಮ್ಮ ನನ್ನ ಕಳವ್ಯಾಳ ನಾರಿ
ನಮ್ಮಮ್ಮನೇ ನನ್ನ ಕಳವಿನಿ ತಕೊಂಡು
ಸಾಲಾ ಸಂಪಿಗೆ ನೆರಳಲ್ಲಿ
ಸಾಲಾ ಸಂಪಿಗೆ ನೆರಳಲ್ಲಿ ನೀತಕೊಂಡು
ದುಃಖ ಮಾಡೇಳೆ ಶಿವನಿಗೆ ನಾರಿ
ದುಃಖವ ಮಾಡಲಿಕೆ ದುಡಿದು ಕೊಂಬುಗಮಗನಿಗೆ

ಹೆತ್ತಲ್ಲಿ ತಾಯಿ ಹೆರವೀಗೆನಾರಿ
ಹೆತ್ತಲ್ಲಿ ತಾಯಿ ಹೆರವಿಗೆ ಹೆಣ್ಣು

ಮಗಳ ದುಃಖ ಮಾಡತೀರೆ ಹಡದವ್ವ ನಾರಿ
ಅತ್ತೆ ಮಾವಂದಿರಿಗೆ ಮತ್ತ ಬಾಂಧವರಿಗೆ
ಕಣ್ಣೆಟ್ಟು ನೀನು ಸಲಹಮ್ಮ ನಾರಿ
ಕಣ್ಣಿಟ್ಟು ಸಲುಹಿ ಚಿತ್ತೂರ ಹೆಸರ ತರಬೇಕು ನಾರಿ
ಚಿತ್ತೂರನೇ ಹೆಸರ ತರಬೇಕು ತಾಯೆಣ್ಣಿ
ಹಚ್ಚೆ ಹೊಯೋದೆ ಹರಿಯಣ್ಣ ನಾರಿ

ಅಕ್ಕಾ ಹೋಗೋಣಾ ಬಾರೆ ಕಿಕ್ಕೇರಿಗೆ
ಹಚ್ಚೆ ಹೊಯ್ಯುದೇ ನಿನ್ನ ಬಲನಾರಿ
ಹಚ್ಚೆಗೇ ಹೊಯ್ಯುದು ನಿನ್ನ ಬಲ ಇರಲೆಮ್ಮ
ಚುಕ್ಕಿಸಿಕೊಳ್ಳುದೇ ನಿನ್ನ ಬಲನಾರಿ
ಚುಕ್ಕಿಸಿಕೊಳ್ಳುದೇ ನಿನ್ನ ಬಲ ನಾರಿ ಇರಲಮ್ಮ
ಕೂಲಿ ಕೊಡುವಾಗ ನಿಮ್ಮ ದುಃಖದಿ
ಊರು ನೋಡು
ಹುಬ್ಬಳ್ಳಿ ನೋಡು
ಹುಬ್ಬಳ್ಳಿ ಮೇಲೆ
ಧಾರವಾಡ ನೋಡು
ಧಾರವಾಡದ ಮೇಲೆ
ಕೆರೆ ನೋಡು
ಕೆರೆ ಮೇಲೆ
ನೀರು ನೋಡು
ಕೇರೆಗೆ ಬರುವ ಬಾಲೆ ನೋಡು
ಬಾಲೆ ಉಟ್ಟಿರುವ ಸೀರೆ ನೋಡು
ಸೀರೆ ಮೇಲೆ ಸಿಂಬೆ ನೋಡು
ಸಿಂಬೆ ಮೇಲಿನ ಕೊಡಾ ನೋಡು
ಕೋಡದ ಮೇಲಿನ ಕೈ ನೋಡು
ಕೈ ಮೇಲಿನ ಅಚ್ಚೆ ನೋಡು
ಅಚ್ಚೆ ನೋಡಿ
ಬೆಚ್ಚಿ ಬಿದ್ದಾನೆ...

ಎಂದು ಜನಪದ ಹುಡಗಿಯೊಬ್ಬಳು ತನ್ನನು ಮದುವೆಯಾಗುವ ಹಡುಗನನ್ನು ಕುರಿತು ಹೇಳುತ್ತಾಳೆ.

## ಮೋಡಿ

ಮೋಡಿ ವಿದ್ಯೆ ವೃತ್ತಿ ಮತ್ತು ಹವ್ಯಾಸಿ ರಂಗಗಳಲ್ಲಿ ಬೆಳೆದು ಬಂದಿದ್ದು, ಈ ಮೋಡಿ ವಿದ್ಯೆಯನ್ನೇ ಉಪಜೀವನಕ್ಕಾಗಿ ಆಶ್ರಯಿಸಿಕೊಂಡು ಅದನ್ನು ವಂಶಪಾರಂಪರೆಯಿಂದ ಉಳಿಸಿಕೊಂಡು, ಬೆಳೆಸಿಕೊಂಡು ಬಂದವರೇ ಮೋಡಿಕಾರರು. ಮೋಡಿ ಕಲೆಯು ಅತೀ ಪ್ರಾಚೀನ ಕಲೆಯಾಗಿದೆ. ಕರ್ನಾಟಕದ ಬಹುತೇಕ ಪ್ರದೇಶಗಳಲ್ಲಿ ಈ ಕಲೆ ಕಂಡುಬರುತ್ತದೆ. ಮೋಡಿಯು ಒಂದು ಕೋಮಿಗೆ ಸೀಮಿತವಾಗಿಲ್ಲ. ಆದರೆ ಹೆಚ್ಚಾಗಿ ಕೆಳಜಾತಿಯವರಲ್ಲಿ ಅದರಲ್ಲಿಯೂ ಕೊರಮರಲ್ಲಿನ ಒಳಪಂಗಡವಾದ ಕುಂಚಿಕೊರವರ ಜೊತೆ ಕಳ್ಳುಬಳ್ಳಿ ಸಂಬಂಧ ಹೊಂದಿದವರಾಗಿದ್ದಾರೆ. ಇವರು ತಮ್ಮನ್ನು ಕಂಚಿಗೊಲ್ಲರು, ಪೆದ್ದಟ್ಟಿಗೊಲ್ಲರು, ಎಂದು ಕರೆದುಕೊಳ್ಳುತ್ತಾರೆ. ಇನ್ನೂ ಕೆಲವರು ಮೋಡಿಕಾರರೆಂದೇ ಹೇಳಿಕೊಳ್ಳುವರು. ಕೊರಮರೊಂದಿಗೆ ಕೊಡುಕೊಳ್ಳುವಿಕೆ ಸಂಬಂಧ ಹೊಂದಿದ್ದಾರೆ. ಆದರೆ ತಮ್ಮ ಸಾಮಾಜಿಕ ಸ್ಥಾನಮಾನ ಎತ್ತರಿಸಿಕೊಳ್ಳುವ ದೃಷ್ಟಿಯಿಂದ ಪೆದ್ದಟ್ಟಿಗೊಲ್ಲರು, ಕಂಚಿಗೊಲ್ಲರು ಎಂದು ಹೇಳಿಕೊಳ್ಳುತ್ತಿರುವುದು ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಿತು. ಮೋಡಿ ವಿದ್ಯೆ ಮಾಡುವ ಈ ಗುಂಪು ಕೊರಮರಿಂದಲೆ ಒಡೆದು ಹೋದ ಒಳ ಗುಂಪು ಎಂಬುದು ತಿಳಿದು ಬರುತ್ತದೆ. ಕರ್ನಾಟಕದಲ್ಲಿರುವ ಮೋಡಿಕಾರರು ಆಂಧ್ರದ ಕಡೆಯಿಂದವಲಸೆ ಬಂದವರಾಗಿರಬೇಕು. ಅವರ ಮಾತೃ ಭಾಷೆ ಕುಳುವ ಆಗಿದೆ.

ಮೋಡಿ ವಿದ್ಯೆ ವೃತ್ತಿಯಿಂದ ಹವ್ಯಾಸಕ್ಕೆ ಇಳಿಯಿತೋ ಅಥವಾ ಹವ್ಯಾಸವೇ ಬಲಗೊಂಡು ವೃತ್ತಿಯಾಯಿತೋ ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಾಗದು. ಬಹುಶಃ ರೋಮಾಂಚನಕಾರಿ ಮನರಂಜನೆಯಾದ ಮೋಡಿ ವಿದ್ಯೆಯು ಸರ್ವೆ ಸಾಮಾನ್ಯವಾಗಿ ಒಂದು ಹವ್ಯಾಸವಾಗಿ ಮೊದಲು ಬೆಳೆದಿರಬೇಕು. ಅದನ್ನೆ ಕೆಲವರು ವೃತ್ತಿಯನ್ನಾಗಿ ಅವಲಂಬಿಸಿಕೊಂಡು ಬಂದಿರಬೇಕು. ಇಲ್ಲವೇ ವೃತ್ತಿಕಾರರ ಈ ವಿದ್ಯೆ ಇತರರನ್ನು ಆಕರ್ಷಿಸಿರಬೇಕು. ನಂತರ ಅದೊಂದು ಹವ್ಯಾಸವಾಗಿ ಬೆಳೆದಿರಬೇಕು. ಇಲ್ಲಿ ಇವೆರಡೂ ಸಾಧ್ಯತೆಗಳನ್ನು ಅಲ್ಲಗಳೆಯಲು ಬರುವುದಿಲ್ಲ. ಮೋಡಿಯಲ್ಲಿ ಕೈಚಳಕ ಪ್ರಧಾನವಾದುದು. ಇದನ್ನು ಮಾಟ ಮಂತ್ರ ಎಂದು ಜನಸಾಮಾನ್ಯರು ಕರೆಯುವರು.

ಮೋಡಿ ಆಟದಲ್ಲಿ ಎರಡು ವಿಧಾನಗಳಿವೆ. ಒಂದು ರಣಮೋಡಿ, ಇನ್ನೊಂದು ರಾಜಮೋಡಿ. ಇತರರೊಂದಿಗೆ ಸ್ಪರ್ಧೆಗೆ ನಿಂತು ಆಡುವ ಭಯಂಕರ ಆಟವೇ ರಣಮೋಡಿ. ಇದೇ ನಿಜವಾದ ಮೋಡಿಯಾಟ. ರಾಜಮೋಡಿ ಅಂದರೆ ಮೋಡಿಕಾರರು ತಮ್ಮಷ್ಟಕ್ಕೆ ತಾವೇ ಜಾತ್ರೆ, ಸಂತೆಗಳಲ್ಲಿ ಪ್ರದರ್ಶನ ಮೂಲಕ ಮನರಂಜನೆ ನೀಡಿ ಜನರಿಂದ ಹಣ ಸಂಪಾದಿಸುವುದು. ರಣಮೋಡಿಯೊಂದಿಗೆ ಹೋಲಿಸಿದರೆ ಇದು ಬಹಳಷ್ಟು ಸರಳ ಮತ್ತು ಅಪಾಯರಹಿತ ಪ್ರದರ್ಶನವಾಗಿದೆ. ಮೋಡಿ ಕಲೆಯಲ್ಲಿ ತಂಡದಿಂದ ತಂಡಕ್ಕೆ ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಕೆಲವು ವ್ಯತ್ಯಾಸಗಳಿರಬಹುದು. ಎಲ್ಲರಲ್ಲೂ ಒಂದೇ ತೆರನಾದ ಪ್ರದರ್ಶನ ಕಂಡುಬರುವುದಿಲ್ಲ. ಆದ್ದರಿಂದ ಅವುಗಳಲ್ಲಿ

ಕೆಲವು ಪ್ರಮುಖ ಪ್ರಯೋಗಗಳೆಂದರೆ, ಕಣ್ಣುಗಳನ್ನು ಕಿತ್ತು ತೋರಿಸುವುದು, ಜೋಡಿಸುವುದು, ಎರಡು ಅಡಿ ಉದ್ದವಿರುವ ಕಬ್ಬಿಣದ ಕತ್ತಿಯನ್ನು ನುಂಗುವುದು, ಕೆಂಪಗೆ ಕಾದ ಕಬ್ಬಿಣದ ಸಲಾಕೆಯನ್ನು ಬಾಯಲ್ಲಿ ಕಚ್ಚಿ ತೆಗೆದು ನಾಲಿಗೆ ಮೇಲಿರಿಸಿ ಕೊಳ್ಳುವುದು. ಬೆಂಕಿ ತುಂಬಿದ ಪಾತ್ರೆಯನ್ನು ಬರೀ ಮೈಮೇಲ ಇರಿಸಿಕೊಳ್ಳುವುದು ಹಾಗೂ ನೆಟ್ಟಿರುವ ಬಾಳೆಕಂಬವನ್ನು ಕತ್ತರಿಸುವುದರ ಮೂಲಕ ಮೋಡಿ ತೆಗೆಯುವನ ತಲೆಯನ್ನು ಬೇರ್ಪಡಿಸುವುದು, ರಾಟಿ ತಿರುಗಿಸಿದಾಗ ಪ್ರತಿಸ್ಪರ್ಧಿ ಮೇಲಕ್ಕೇರಿ ಅಂತರದಲ್ಲಿ ನಿಲ್ಲುವುದು. ತೆಂಗಿನಕಾಯಿ ಒಡೆದಕೂಡಲೆ ಎದುರಾಳಿಯ ತಲೆ ಒಡೆಯುವುದು, ಬಾಳೆಯ ಕಂಬಕ್ಕೆ ಚಾವಡಿಯಿಂದ ಹೊಡೆದಾಗ ಎದುರಾಳಿಯ ಮೈಮೇಲೆ ಬಾಸುಂಡೆಗಳೇಳುವುದು. ಜೇನುಹುಳಗಳನ್ನು ಸೃಷಿಏಸಿ ವೈರಿಯನ್ನು ಕಂಗೆಡಿಸುವುದು, ಪ್ರತಿಸ್ಪರ್ಧಿ ಗಾಜು, ತಗಣೆ, ಮಲ, ಹಂಚು, ತಿನ್ನುವಂತೆ ಮಾಡುವುದು ಇತ್ಯಾದಿ ಮೋಡಿ ಆಟಗಳನ್ನು ಪ್ರದರ್ಶಿಸುತ್ತಾರೆ.

ಇವರ ಆಟಕ್ಕೆ ಬಾಣಂತಿ ತಲೆ, ಬಾಣಂತಿ ಕೈ ಅವಶ್ಯವಾಗಿ ಬೇಕೆಬೇಕು. ಅವುಗಳನ್ನು ತೆಗೆದುಕೊಂಡು ಬರುವ ವಿಧಾನ ಭಯಂಕರವಾದುದು. ಸತ್ತ ಬಾಣಂತಿಯನ್ನು ಮಣ್ಣು ಮಾಡಿದ ಕುಣಿಯನ್ನು ಮೊದಲೇ ಗುರುತು ಹಚ್ಚುತ್ತಾರೆ. ಅಮವಾಸ್ಯೆಯ ದಿನ ಮದ್ಯರಾತ್ರಿ ಹುಟ್ಟುಡುಗೆಯಲ್ಲಿ ಸ್ಮಶಾನಕ್ಕೆ ಹೋಗಿ ಬಾಣಂತಿಯ ತಲೆ ಮತ್ತು ಕೈ ತೆಗೆದುಕೊಂಡು ಬರುವುದಾಗಿ ಹೇಳುವರು..

ರಣಮೋಡಿಯಾಗಲಿ ರಾಜಮೋಡಿಯಾಗಲಿ ತಂದೆಯಿಂದ ಮಗನಿಗೆ ವಂಶಪಾರ್ಯವಾಗಿ ಮುಂದುವರಿಯುವುದೇ ಹೆಚ್ಚು. ಮೋಡಿಕಾರರಿಗೆ ತನ್ನ ಸೀಮೆಯಲ್ಲಿ ಯಾರೂ ಮೊದಲಿಗರಿರಬಾರದು ಎಂಬ ಛಲ ಇರುತ್ತದೆ. ಮೋಡಿಯ ವಿದ್ಯೆಯ ಮೂಲಕ ಜನರನ್ನು ರಂಜಿಸುತ್ತಾ ತಮ್ಮ ಉಪಜೀವನ ನಡೆಸುವರು. ಆದರೆ ಇಂದು ಮೋಡಿ ಆಟ ಸಾವಿನಂಚಿನಲ್ಲಿರುವ ಕಲೆಯಾಗಿದೆ. ಇಂದು ಸಮೂಹ ಮಾಧ್ಯಮದ ಪ್ರಭಾವದಿಂದಾಗಿ ಇವರ ಕಲೆಗೆ ಹೆಚ್ಚು ಪ್ರೋತ್ಸಾಹ ಸಿಗುತ್ತಿಲ್ಲ. ಸರ್ಕಾರವು ಕೂಡ ಇವರನ್ನು ನಿರ್ಲಕ್ಷ್ಯ ಮಾಡುತ್ತಿದೆ.ಮೋಡೀಕಾರರು ಸಂವಿಧಾನಿಕ ಸವಲತ್ತುಗಳಿಂದ ವಂಚಿತವಾಗಿದ್ದು, ಅತ್ಯಂತ ಹಿನಾಯ ಸ್ಥಿತಿಯಲ್ಲಿ ಜೀವನ ನಡೆಸುತ್ತಿದ್ದಾರೆ(ಅನುಬಂಧ ನೋಡಿ)

# ೧೦

# ವಿಮುಕ್ತ ಬುಡಕಟ್ಟು

**ಒಂ**ದು ನೆಲೆಯಲ್ಲಿ ನೆಮ್ಮದಿಯಿಂದ ಹೇಗೋ ಜೀವನ ಕಂಡುಕೊಂಡಿದ್ದ ಬುಡಕಟ್ಟು ಗಳ ಬದುಕಿನ ಮೇಲೆ ಉಂಟಾದ ಅನಿರೀಕ್ಷಿತ ದಾಳಿಯಿಂದಾಗಿ ಆ ಜನ ತತ್ತರಿಸಿ ಹೋದರು. ಜೀವ ಹಿಡಿಯುವುದು ಅನಿವಾರ್ಯವಾದ್ದರಿಂದ ಕಾಡಿನಿಂದ ನಾಡಿಗೆ ಬರಬೇಕಾಯಿತು. ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ಬ್ರಿಟಿಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲೂ ಧಕ್ಕೆ ಬಂದಿರಲಿಲ್ಲ. ಬ್ರಿಟಿಷರು ಬಂದ ನಂತರ ಭಾರತದಾದ್ಯಂತ ರೇಲ್ವೆ ಸಂಪರ್ಕ ಏರ್ಪಡಿಸಲು ರಸ್ತೆಗಳನ್ನು ಆರಂಭಿಸಿದರು. ಇದರಿಂದ ಕಾಡು ಮೇಡುಗಳನ್ನು ಕಡಿಯ ಬೇಕಾಯಿತು. ಸಂಪರ್ಕ ಸಾಧನಗಳು ಹೆಚ್ಚಿದಂತೆಲ್ಲ ಪರ್ವತಾರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟು ಜನರು ಅನಿವಾರ್ಯವಾಗಿ ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಹೀಗೆ ಬಂದ ಬುಡಕಟ್ಟುಗಳು ಪರಕೀಯತೆನ್ನನುಭವಿಸುವುದರ ಜೊತೆಗೆ ತೀವ್ರ ಆರ್ಥಿಕ ಬಿಕ್ಕಟ್ಟಿಗೆ ಸಿಕ್ಕಿಕೊಳ್ಳಬೇಕಾಯಿತು ಪುನರ್ವಸತಿಗಳನ್ನು ಕಲ್ಪಿಸದೇ ಇದ್ದುದು ಆ ಜನರಿಗೆ ದಿಕ್ಕು ತಪ್ಪಿಸಿದಂತಾಯಿತು. ಕೆಲವು ಬುಡಕಟ್ಟುಗಳು ಬ್ರಿಟಿಷರ ವಿರುದ್ಧ ತಮ್ಮ ಅಸ್ತಿತ್ವಕ್ಕಾಗಿ ದಂಗೆ ಎದ್ದರೂ ಪ್ರಯೋಜನವಾಗಲ್ಲಿಲ್ಲ. ಅಂಥವರ ದಂಗೆಯನ್ನು ಅಡಗಿಸಿಡಲು ಇಂತಹ ಬುಡಕಟ್ಟುಗಳನ್ನು ಅಪರಾದಿ ಬುಡಕಟ್ಟುಗಳೆಂದು ಪರಿಗಣಿಸಿತು. ಬ್ರಿಟಿಷ ಸರಕಾರ ಇವುಗಳ ಮೇಲೆ ವಿಶೇಷ ಕಾನೂನು ಕ್ರಮಗಳನ್ನು ರಚಿಸಿತು. ಹೀಗೆ ಬ್ರಿಟಿಷರ ಆಡಳಿತ ಕ್ರಮದಿಂದಾಗಿ ಮೂಲ ನೆಲೆಯನ್ನು ಕಳೆದುಕೊಂಡ ಬುಡಕಟ್ಟುಗಳು ಉದ್ಯೋಗಾವಕಾಶಗಳು ದೊರಕದೆ ಪರಕೀಯತೆಯ ಜೊತೆಗೆ ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿ ಅಪರಾಧಿಗಳೆನ್ನಲ್ಪಟ್ಟರು. ಇವರನ್ನು ಅಪರಾಧಿಗಳೆಂದು ದಂಡಿಸಿ ತಮ್ಮ ಅನೂಕೂಲ ಕ್ಕಾಗಿ ದುಡಿಸಿಕೊಂಡಿರುವುದು ಗೋಚರಿಸುತ್ತದೆ.

ಪ್ರತಿಕೂಲಕರ ಕಾಯ್ದೆ ರದ್ದಾದರೂ ವಿಮುಕ್ತ ಬುಡಕಟ್ಟುಗಳಿಗೆ ಪೋಲಿಸರ ಯಥಾ ದೃಷ್ಟಿ ಮಾತ್ರ ಬದಲಾಗಿಲ್ಲ. ಆಚರಣೆ ಮತ್ತು ರೂಡಿಗಳಲ್ಲಿ ಪೋಲಿಸರು ಸಂಪೂರ್ಣ ಪಂಗಡವನ್ನೆ ಆಜನ್ಮ ಅಪರಾಧಿಗಳೆಂದು ಮುದ್ರೆ ಒತ್ತುವಲ್ಲಿ ಅದೇ ಹಳೆಯ ಭಾವನೆಗಳಿಗೆ ಅಂಟಿಕೊಂಡಿದ್ದರು.

ಅಲೆಮಾರಿಗಳ ಸಹಜ ಬದುಕನ್ನು ತಪ್ಪೆಂದು ಪರಿಗಣಿಸಿ ಅವರನ್ನು ಬಂಧಿಸ ತೊಡಗಿದರು. ಇವರಿಗೆ ವಿಶೇಷ ಜೇಲುಗಳನ್ನು ಸ್ಥಾಪಿಸಿದರು. ಸುತ್ತಲು ಮುಳ್ಳಿನ ತಂತಿಯ ಬೇಲಿ ಕಂಪೌಂಡ ಹಾಕಿ ಮಧ್ಯದಲ್ಲಿ ಮನೆಗಳನ್ನು ಕಟ್ಟಿಸಿ ಅವುಗಳಲ್ಲಿ ಅವರ ಕುಟುಂಬ ದೊಂದಿಗೆ ಬಂಧಿಯಲ್ಲಿಡುತ್ತಿದ್ದರು. ಇದರ ನಿರ್ವಹಣೆಗಾಗಿ ವಿಶೇಷ ಅಧಿಕಾರಿ ಹಾಗೂ ಸಿಂಬ್ಬಂದಿಗಳನ್ನು ನೇಮಿಸಲಾಗಿತ್ತು. ಇವರು ಹೊರಗೆ ಹೊಗಬೇಕಾದರೆ ಅಧಿಕಾರಗಳ ಪರವಾನಿಗೆ ಪಡೆದುಕೊಂಡು ಹೋಗಬೇಕಾಗುತ್ತಿತ್ತು. ೩.೧.೩.೧೯೩೫ರಂದು ಮದ್ರಾಸ ಉಚ್ಚನ್ಯಾಯಾಲಯದ ನ್ಯಾಯಾಧೀಶರಾದ ದಿವಾನ ಬಹಾದ್ದೂರ ವಿ ಒಸ್ವಾಮ ಐಯಂಗರ್ 'ಗುನ್ಹೆಗಾರ ಜಾತಿ' (Criminal Tribes) ಕಾಯ್ದೆಯ ಬಗೆಗೆ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದರು.

> I venture to doubt wether a statute which Empowers the Executive to declare a whole Community as criminal tribes and bring it under the very stringent and penal provisions of the Act can be Justified in these advancing times, some of the specific provisions at this Act are so gaining and capable of so much misuse that they require to be modified at an early date it is to be hoped that the local Government will cause no more time in taking on the question of ending or mending the present Act and rules and they by rendering Justice to the large classes of people who are being group by them.

೧೮.೧೦.೧೯೩೭ರಂದು ಆಂಧ್ರ ಪ್ರದೇಶದ ನೇರಲಾ ಊರಿನಲ್ಲಿ ಸಾರ್ವಜನಿಕ ಸಭೆಯೊಂದರಲ್ಲಿ ಪಂಡಿತ ಜವಾಹರಲಾಲ್ ನೆಹರೂರವರು ಗುನ್ಹೆಗಾರ ಜಾತಿಗಳ ಬಗ್ಗೆ ಮಾತನಾಡುತ್ತ ಗುನ್ಹೆಗಾರ ಜಾತಿ ಕಾಯ್ದೆ ಜಾರಿಗೊಳಿಸಿದ್ದು ಸಮಂಜಸ ವಾಗಿಲ್ಲವೆಂದು ನುಡಿದರು. ಈ ವಿಷಯ ಕಾಂಗ್ರೆಸ್ ಪಕ್ಷದಲ್ಲಿ ಚರ್ಚೆಯಾಗತೊಡಗಿತು.

> I am aware of this monstrous provision of Criminal Tribes Act which constitutes a negation of civil liberty. Wide publicity should be given to its working and an attempt made to have the Act removed from the Statute Book. No tribe could be classified as criminal as such and the whole prinicipal is out of consonance with all civilized principles of criminal Justice and treatment of offenders

೧೦.೧೦.೧೯೪೩ರಂದು ಬಿಹಾರ ಪ್ರಾಂತದಲ್ಲಿ ಗುನ್ಹೆಗಾರ ಜನಾಂಗಗಳ ಮಹಾಸಭೆಯಲ್ಲಿ ರಾಜ್ಯಪಾಲ ಶ್ರೀ ಎಂ ಎಸ್ ಆಣೆ ಅಧ್ಯಕ್ಷತೆ ವಹಿಸಿ ಯಾವ ವ್ಯಕ್ತಿ ತಪ್ಪು ಮಾಡಿರುತ್ತಾನೆ ಅವನು ಅಪರಾಧಿ. ಅವನ ಕುಟುಂಬವಾಗಲಿ, ಇಡೀ ಸಮುದಾಯ ವಾಗಲಿ ಅಪರಾಧಿ ಅಲ್ಲವೆಂದು ಹೇಳಿದರು.

ಇಷ್ಟೆಲ್ಲ ವಿರೋಧಗಳು ಆಗುತ್ತಿದ್ದರೂ ಬ್ರಿಟಿಷ್ ಸರ್ಕಾರ ಮಣಿಯಲಿಲ್ಲ. ಈ ಕಾಯ್ದೆಯನ್ನು ಜಾರಿಯಲ್ಲಿ ಇಟ್ಟು ಗುನ್ಹೆಗಾರ ಜನಾಂಗಗಳ ಸುಧಾಹರಣೆಗಳಿಗಾಗಿ ಪ್ರಯತ್ನ ಮಾಡಿತು. ಹಲವಾರು ಸವಲತ್ತುಗಳನ್ನು ಜಾರಿಗೊಳಿಸಿ ಅಮಲಿನಲ್ಲಿ ತಂದಿತು.

ಬ್ರಿಟೀಷರ ಕಾಲದಿಂದಲೂ ಅಪರಾಧಿಗಳೆನಿಸಿಕೊಂಡಿರುವ ಕೊರಮರು ಅಪರಾಧಿ ಬುಡಕಟ್ಟುಗಳ ಪಟ್ಟಿಯಲ್ಲಿ ಕಾಣಸಿಗುತ್ತಾರೆ. ಅಪರಾಧಿ ಬುಡಕಟ್ಟುಗಳ ನಿಯಂತ್ರಣಕ್ಕಾಗಿ ೧೯೫೨ರವರೆಗೆ ಜಾರಿಯಲ್ಲಿದ್ದ ಅಪರಾಧಿ ಬುಡಕಟ್ಟು ನಿಯಂತ್ರಣ ಕಾಯಿದೆ ಕೊರಚರ ಬದುಕನ್ನು ಸಾಕಷ್ಟು ಅಧೋಗತಿಗೆ ತಳ್ಳಿತು. ಕೊರಮರು ಕಳ್ಳತನದಲ್ಲಿ ತೊಡಗಿದ್ದಾರೆಂಬು ದನ್ನು ಅನೇಕ ವಿದ್ವಾಂಸರು ತಮ್ಮ ಗ್ರಂಥಗಳಲ್ಲಿ ವಿಶೇಷವಾಗಿ ದಾಖಲಿಸಿದ್ದಾರೆ. ಹಾಗೆಂದ ಮಾತ್ರಕ್ಕೆ ಇಡೀ ಬುಡಕಟ್ಟೆ ಕಳ್ಳತನದಲ್ಲಿ ತೊಡಗಿತ್ತೆಂದು ಹೇಳಲಾಗದು.

ಯಾವುದೇ ಬುಡಕಟ್ಟು ಮೂಲತಃ ಅಪರಾಧಿಯಾಗಿಯೇ ಹುಟ್ಟಿರಲು ಸಾಧ್ಯವಿಲ್ಲ. ಬ್ರಿಟಿಷರು ಈ ದೇಶಕ್ಕೆ ಕಾಲಿಡುವ ಮೊದಲು ಬುಡಕಟ್ಟುಗಳು ಅಪರಾಧ ಪ್ರಕರಣಗಳಲ್ಲಿ ಭಾಗಿಯಾಗಿದ್ದುದರ ಕುರಿತಾದ ಯಾವ ವಿವರಗಳು ದೊರೆಯುವುದಿಲ್ಲ. ಹಾಗಿದ್ದರೂ ತಮ್ಮ ಜಾತಿ ಪಂಚಾಯತಿಗಳಲ್ಲಿ ಪರಿಹಾರ ಕಂಡುಕೊಳ್ಳಲಾಗುತಿತ್ತು. ಬುಡಕಟ್ಟುಗಳ ಸ್ವಾಯತ್ತತೆಗೆ ಧಕ್ಕೆಯಾದಾಗ ಅನಿವಾರ್ಯವಾಗಿ ಕೆಲವು ಬುಡಕಟ್ಟುಗಳು ವ್ಯವಸ್ಥೆಯ ವಿರುದ್ಧ ಸಿಡಿದೆದ್ದವು. ಅವುಗಳನ್ನೇ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಲು ಬ್ರಿಟಿಷರು ಅಪರಾಧಿ ಬುಡಕಟ್ಟುಗಳೆಂದು ಅಧಿಸೂಚಿಸಿದರು. ಇವರ ಸಾಹಸವನ್ನು ಸ್ಥಳೀಯರು ತಮ್ಮ ಲಾಭಕ್ಕಾಗಿ ಬಳಸಿಕೊಂಡು ಇವರನ್ನು ಅಪರಾಧಿಗಳೆಂದು ಹಣೆಪಟ್ಟಿ ಕಟ್ಟಿದರು.

ಪಂಡಿತ ಜವಹರಲಾಲ ನೆಹರು ಅವರಿಂದ ೧೯೫೨ ರಲ್ಲಿ ಸೆಟಲ್‌ಮೆಂಟಗಳ ತಂತಿಯ ಕೊಕ್ಕೆಯನ್ನು ಸಾಂಕೇತಿಕವಾಗಿ ಕತ್ತರಿಸಲಾಯಿತು ಆದರೆ ಪಂಗಡಗಳು ಬೇರ್ಪಟ್ಟು ಜೀವಿಸುವ ಕ್ರಮ ಅಪರಾಧದ ಕಳಂಕದೊಂದಿಗೆ ಹಾಗೆ ಮುಂದುವರೆಯಿತು ಸ್ವತಂತ್ರ ಸಿಕ್ಕು ಆರು ದಶಕಗಳು ಕಳೆದರೂ ವಿಮುಕ್ತ ಬುಡಕಟ್ಟುಗಳ ಜನರ ಸ್ಥಿತಿಗತಿಗಳು ಇಂದಿಗೂ ಬದಲಾಗದೆ ಇರುವುದು ದುರದುಷ್ಟಕರ.ಇಂದಿಗೂ ಇವರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಕೊಡುವಲ್ಲಿ ಸರ್ಕಾರಕ್ಕೆ ಸಾಧ್ಯವಾಗದೇ ಹೋಗಿದೆ.

ಕೊರಮರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿರುವರು.ಇಂದಿಗೂ ಕೊರಮರಂತಹ ಕೆಲವು ಸಮುದಾಯಗಳು ಸಮಾಜದ ಮೇಲುಸ್ಥರಕ್ಕೆ ಬರಲು ಪ್ರಯಾಸ ಪಡಬೇಕಾಗಿದೆ.

ಕೊರಮರು ನಾಲ್ಕು ಗೋಡೆಯ ನಡುವೆ ಬಂಧಿಯಾಗದೆ ಸಮಾಜದಲ್ಲಿ ಮುಕ್ತವಾಗಿ ವ್ಯವಹಾರಿಸುತ್ತಾ ಬಂದಿದ್ದರೂ, ಸಾಮಾಜಿಕವಾಗಿ ತಮ್ಮ ಸ್ಥಾನವನ್ನು ತೀರ ಕೆಳಸ್ತರದಲ್ಲಿ ಕಂಡುಕೊಳ್ಳಬೇಕಾಯಿತು. ಇದಕ್ಕೆ ಅವರ ವ್ಯವಹಾರ ನಡವಳಿಕೆ ಅಲ್ಲದೆ ಅವರ ಅಲೆಮಾರಿತನವೂ ಕಾರಣವಾಗಿದೆ. ಕಾಡಿನಲ್ಲಿದ್ದರೂ ನಾಡಿಗೆ ಬಂದು ಉಪವೃತ್ತಿಗಳನ್ನನು ಸರಿಸಿದರು. ಇವರಲ್ಲಿ ಬಹುಜನ ಅಶಿಕ್ಷಿತರಾಗಿಯೇ ಉಳಿದುದ್ದು ದುರ್ದೈವದ ಸಂಗತಿ.

ಗುಡ್ಡಗಾಡಿನಲ್ಲಿ ವಾಸ ಮಾಡುತ್ತಿದ್ದ ಕೊರಮರು ಹಳ್ಳಿಗಳ ಸಂಪರ್ಕ ಹೊಂದಿದೆಂತೆಲ್ಲ ಹೊಸ ವೃತ್ತಿಗಳನ್ನು ರೂಡಿಸಿಕೊಂಡಂತೆ ಕಾಣುತ್ತದೆ. ಕೊರಮ ಬುಡಕಟ್ಟು ಅಪರಾಧದ

ವಿಷಯದಲ್ಲಿ ಅತಿ ಕೆಟ್ಟ ಹೆಸರನ್ನು ಪಡೆದುಕೊಂಡಿದೆ. ಬೇರೆ ಬೇರೆ ಪ್ರದೇಶದಲ್ಲಿ ವಾಸಿಸುವ ಈ ಜನ ಕಳ್ಳತನ, ಸುಲಿಗೆ, ದರೋಡೆ ಮುಂತಾದವುಗಳಲ್ಲಿ ನಿರತರಾಗಿದ್ದ ಬಗ್ಗೆ ಹಲವು ಜನ ವಿದ್ವಾಂಸರು ರಂಜನೀಯವಾಗಿ ದಾಖಲಿಸಿದ್ದಾರೆ. ಆದರೆ ಒಂದು ಕಾಲಕ್ಕೆ ಜಾನಪದ ಮತ್ತು ಪ್ರೌಢಸಾಹಿತ್ಯದಲ್ಲಿ ತೋರಿ ಬರುವ ಹಾಗೆ, ಇವರು ಆರ್ಥಿಕವಾಗಿ ಹಿಂದುಳಿದು ಕಣಿ ಹೇಳುತ್ತ, ಬುಟ್ಟಿಗಳನ್ನು ಮಾಡಿ ಮಾರುತ್ತಾ ಸಮಾಜದಲ್ಲಿ ಗೌರವದಿಂದ ಬದುಕಿ ಬಂದಿರುವುದನ್ನು ಕಾಣಬಹುದು. ಮೂಲತಃ ಇದೊಂದು ದುಷ್ಟ ಬುಡಕಟ್ಟಾಗಿದ್ದರೆ ಸಮಾಜ ಇವರನ್ನು ದೂರೀಕರಿಸುತ್ತಿತ್ತು. ಮೊದ ಮೊದಲು ಇವರ ಪ್ರವೃತಿ ಒಳ್ಳೆಯದಾದ್ದರಿಂದಲೆ ರಾಜ–ರಾಣಿಯರವರೆಗೂ ಸಂಪರ್ಕವಿರಿಸಿ ಕೊಂಡಿದ್ದರು. ಕೊರಮರನ್ನು ಕಳ್ಳತನ, ದರೋಡೆ, ಲೂಟಿ ಮುಂತಾದ ಕಾರ್ಯಗಳಲ್ಲಿ ತೊಡಗಿಸಿಕೊಂಡುದರ ದಾಖಲೆಗಳು ದೊರೆಯುತ್ತವೆ. ಬ್ರಿಟಿಷರು ಕೊರಮರನ್ನು ಅಪರಾಧಿ ಬುಡಕಟ್ಟೆಂದು ಪರಿಗಣಿಸಿ ಈ ಜನರನ್ನು ಹಿಡಿದು ಗ್ಯಾಂಗುಗಳನ್ನಾಗಿ ಮಾಡಿ ತಮ್ಮ ನಿಯಂತ್ರಣಕ್ಕೆ ತೆಗೆದುಕೊಂಡರು. ಹೊಸದಾಗಿ ರೈಲ್ವೆ ಮಾರ್ಗಗಳನ್ನು ನಿರ್ಮಿಸಲು ಪ್ರಾರಂಬಿಸಿದ್ದ ಬ್ರಿಟಿಷರು ಇಂಥವರನ್ನು ರೈಲ್ವೆ ಗ್ಯಾಂಗುಗಳಿಗೆ ಸೇರಿಸು ತ್ತಿದ್ದರಂತೆ. ಈ ಗ್ಯಾಂಗಿನಲ್ಲಿ ಎ ಗ್ಯಾಂಗು ಬಿ ಗ್ಯಾಂಗು ಎಂದು ಎರಡು ಬಗೆ. ಈ ಗ್ಯಾಂಗುಗಳು ಪೋಲಿಸರ ಹಿಡಿತದಲ್ಲಿಯೇ ಇರುತಿದ್ದವಂತೆ. ಎಲ್ಲೆ ಕಳ್ಳತನವಾದರು ಪೋಲಿಸರು ಈ ಗ್ಯಾಂಗಿನ ಕೊರಮರನ್ನು ಜಪ್ತಿ ಮಾಡುತ್ತಿದ್ದರಂತೆ. ಗ್ಯಾಂಗಿನಲ್ಲಿದ್ದವರು ತಾವು ಬೇರೆ ಕಡೆ ಹೋಗುವ ಸಂದರ್ಭ ಬಂದರೆ ಪೋಲಿಸರಿಂದ ಅಪ್ಪಣೆ ಪಡೆದು ಹೋಗಬೇಕಾಗಿತ್ತಂತೆ. ಅಲೆಮಾರಿಗಳಾಗಿ ಹಳ್ಳಿಯಿಂದ ಹಳ್ಳಿಗೆ ಹೋಗುತ್ತಿದ್ದ ಕೊರಮರು ತಾವು ಇದ್ದ ಹಳ್ಳಿಯ ಪಟೇಲ ಅಥವಾ ಊರ ಗೌಡರಿಂದ ತಮ್ಮ ಪರಿಚಯ ಅಥವಾ ನಡವಳಿಕೆಯ ಬಗೆಗೆ ಪ್ರಮಾಣ ಪತ್ರ ಪಡೆದು ಮುಂದೆ ತಾವು ಉಳಿದು ಕೊಳ್ಳುತ್ತಿದ್ದ ಹಳ್ಳಿಯ ಮುಖಂಡರಿಗೆ ತೋರಿಸಬೇಕಾಗುತ್ತಿತ್ತು. ಇವರಲ್ಲಿ ಕೆಲವರಿಗೆ ಗ್ಯಾಂಗು ಇರಲಿಲ್ಲವಂತೆ.

ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬಂದಿದೆ. ಬ್ರಿಟಿಷರ ಆಳ್ವಿಕೆಗೆ ಮೊದಲು ಬುಡಕಟ್ಟು ಸಮುದಾಯಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲೂ ಧಕ್ಕೆ ಬಂದಿರಲಿಲ್ಲ. ಮುಸಲ್ಮಾನರ ಹಲವಾರು ಶತಮಾನಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟುಗಳು ಸ್ವತಂತ್ರವಾಗಿದ್ದವು. ಬ್ರಿಟಿಷರು ಬಂದ ನಂತರ ಕೈಗಾರಿಕೆ ಕ್ರಾಂತಿಯಿಂದಾಗಿ ಬ್ರಿಟಿಷರು ಭಾರತದಾದ್ಯಂತ ರೇಲ್ವೆ ಸಂಪರ್ಕ ಏರ್ಪಡಿಸಲು ರಸ್ತೆಗಳನ್ನು ಆರಂಭಿಸಿದರು. ಇದರಿಂದ ಕಾಡು ಮೇಡುಗಳನ್ನು ಕಡಿಯಬೇಕಾಯಿತು. ಸಂಪರ್ಕ ಸಾಧನಗಳು ಹೆಚ್ಚಿದಂತೆಲ್ಲ ಪರ್ವತಾರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟು ಜನ ಅನಿವಾರ್ಯವಾಗಿ ಕಾಡನ್ನು ತೊರೆಯಬೇಕಾಯಿತು.

ರ್‍ಯಾಫೈಲ್ ಗಾರೊಫೊಲ್ಲೋ ರವರ ಪ್ರಕಾರ ಅಪರಾಧಕ್ಕೆ ಮನೋವಿಜ್ಞಾನ ಮತ್ತು ಅವನ ದೈಹಿಕತೆಯು ಅವನ ಮೇಲೆ ಒತ್ತಡ ಹೇರಿ ಅವನ್ನನ್ನು ಅಪರಾಧಿತನದ ಕಾರ್ಯ ಮಾಡಲು ಕಾರಣವಾಗುತ್ತದೆ ಎಂದು ಹೇಳುವರು. ಇದು ವ್ಯಕ್ತಿಗತವಾಗಿ

ಬರಬಹುದು. ಸಾಕಷ್ಟು ಅಧ್ಯಯನಗಳು ಕೈಗೊಂಡಾಗ ತಿಳಿದು ಬರುವುದೇನಂದರೆ, ಅಪಾಧಿತ್ವದ ಬಗ್ಗೆ ಇಟಲಿಯನ್ ಶಾಲೆಯು ಸಾಕಷ್ಟು ಕಾರಣಗಳನ್ನು ಹೇಳುತ್ತದೆ. ೧. ವಂಶಗತವಾಗಿಬರುವುದು. ೨. ಅಪರಾಧದ ವಾತಾವರಣದಿಂದ ಎಕೊಲೊಜಿಕಲ್ ಅವುಗಳ ಪರಿಸರದೊಡನೆ ಬರುವಂತಹದ್ದು. ಹಣಕಾಸು ಅಥವಾ ಆರ್ಥಿಕತೆ, ರಾಜಕೀಯ ಸ್ಥಿತಿ, ಮನೋವಿಜ್ಞಾನಲಕ್ಷಣ, ಧಾರ್ಮಿಕತೆ, ಸಾಮಾಜಿಕ ನೀತಿಗಳು, ಮದ್ಯಸೇವನೆ, ಮಾದಕ ವಸ್ತುಸೇವನೆ ಇವು ಇನ್ನುಳಿದ ಕಾರಣಗಳಾಗಿವೆ. ಆದರೆ ಸಾಕಷ್ಟು ಅಭಿಪ್ರಾಯಗಳ ಪ್ರಕಾರ ಈ ಹೇಳಿಕೆಗಳಿಗೆ ಒಪ್ಪಿಗೆ ಇಲ್ಲ. ಅಪರಾಧ ಮಾಡುವುದಕ್ಕೆ ನಿಜವಾದ ಕಾರಣ ವೆಂದರೆ ಅವರ ಆರ್ಥಿಕ ಸ್ಥಿತಿಯಿಂದ ಅವರು ಅಪರಾಧಿಗಳಾಗಿ ಪರಿವರ್ತನೆ ಯಾಗುತ್ತಾರೆ.

ಲಕ್ಷ್ಮಣ ಗಾಯಕವಾಡರು ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿದಂತೆ ಈ ಆಚರಣೆಗೂ ಸಹ ಧಾರ್ಮಿಕ ವಿಧಿ ವಿಧಾನಗಳಿವೆ. ಕೆಲವು ಪಂಗಡದ ಮಹಿಳೆಯರು ಸೂಳೆಯ ರಾಗಿದ್ದಾರೆ. ಕೆಲವು ಪಂಗಡದವರು ಅಕ್ರಮ ಸರಾಯಿ ವ್ಯಾಪಾರದಲ್ಲಿ ಸಕ್ರೀಯವಾಗಿ ತೊಡಗಿದ್ದಾರೆ. ಅಪರಾಧವು ಮಾನವನ ನಾಗರಿಕತೆಯ ಒಂದು ಭಾಗವಾಗಿದೆ. ಇದು ಎಲ್ಲೆಲ್ಲಿಯೂ ಪ್ರತಿ ಜಾತಿ, ಪಂಗಡ, ಮತಗಳಲ್ಲಿಯೂ ಇದೆ. ಆಧುನಿಕವಾದ ಕೆಲವು ಕುಟುಂಬಗಳು ಪಾಪಕರ್ಮಗಳಲ್ಲಿ ತೊಡಗಿರುವ ಮತ್ತು ಅಪರಾಧಗಳನ್ನು ತಲೆತಲಾಂತರ ದಿಂದ ಮಾಡುತ್ತಿರುವ ಕೆಲವು ಆಧುನಿಕ ಕುಟುಂಬಗಳಿವೆ. ಅನೇಕ ಉನ್ನತ ಜಾತಿಯ ಜನರು ಸುಶಿಕ್ಷಿತರು ಮತ್ತು ಶ್ರೀಮಂತರು ನಮ್ಮ ಸಮಾಜದಲ್ಲಿ ಪ್ರತಿದಿನವು ಅಪರಾಧ ಮಾಡುವುದನ್ನು ನಾವು ನೋಡುತ್ತೇವೆ. ರಾಜಕಾರಣಿಗಳ ವರ್ಗವು ಅಪರಾಧದಲ್ಲಿ ಮೀನಿನಂತೆ ಸರಾಗವಾಗಿ ಈಜುತ್ತಾರೆ. ನಾವು ಅವರನ್ನು ಹೆಗಲ ಮೇಲೆ ಹೊತ್ತು ನಮ್ಮ ಪ್ರಭುಗಳನ್ನಾಗಿ ಮಾಡುತ್ತೇವೆ. ಅಜನ್ಮ ಅಪರಾಧಿಕರಣವು ನಮ್ಮ ಸಮಾಜದಲ್ಲಿ ವಿಸ್ತರಿಸುತ್ತಿದೆ. ನಾವು ಅದಕ್ಕೆ ಕಳಂಕವನ್ನು ಅಂಟಿಸದಿರುವ ಪರಿಪಾಠವನ್ನು ಹಾಕಿ ಕೊಂಡಿದ್ದವೆ. ನಾವು ಹುಲಿಯನ್ನು ಹೊಗಳುತ್ತೇವೆ ಅದೆ ಹಾಲು ಕುಡಿಯುವ ಬೆಕ್ಕನ್ನು ಶಪಿಸುತ್ತೇವೆ. ಮೊಸಳೆಗೆ ಹೆದರುತ್ತೇವೆ ಅದೆ ಅದರ ಕಿರಿಯ ಸೋದರ ಹಲ್ಲಿಯನ್ನು ಕೀಳಾಗಿ ಕಣುತ್ತೇವೆ. ಅಪರಾಧವು ಅಪರಾಧವೇ, ಅಪರಾಧಿಯು ಅಪರಾಧಿಯೇ. ಆದರೆ ಆಯ್ಕೆಯಿಂದ ಅಪರಾಧ ಮಾಡುವ ಉತ್ತಮ ಅಪರಾಧಿ ಮತ್ತು ನಿರಾಧಾರವಾಗಿ ಅಲೆದಾಡುತ್ತಿರುವ ತಲೆಮಾರಿನಿಂದ ಉದ್ಭವಿಸಿದ ಅಪರಾಧಿ ಪಟ್ಟಿಯಲ್ಲಿರುಬವರ ನಡುವೆ ವ್ಯತ್ಯಾಸವಿದೆ.

ಅಲೆಮಾರಿ ಬುಡಕಟ್ಟು ಸಮುದಾಯಗಳ ಜನರು ಒಂದು ಕಾಲದಲ್ಲಿ ಬ್ರಿಟೀಷ ಏಕರೂಪದ ಆಡಳಿತ ನೀತಿಯಿಂದಾಗಿ ಕಾಡು ಬಿಟ್ಟು ನಾಡಿಗೆ ಬಂದು ಸಹಜ ಬದುಕುವುದೇ ಕಷ್ಟವೆನಿಸಿ ಉದ್ಯೋಗವನ್ನರಿಸುವಲ್ಲಿ ವಿಫಲರಾಗಿ ಅಪರಾಧಿಗಳಂತೆ ಕಂಡುಬಂದಿರುವುದು ಅಷ್ಟೆ ಸತ್ಯಾವಾಗಿದೆ. ಆದರೆ ವ್ಯಕ್ತಿ ಮಾಡಿದ ತಪ್ಪುಗಳನ್ನು ಸಮುದಾಯಗಳ ಮೇಲೆ ಹಾಕಿ ಇವತ್ತಿಗೂ ಅಂತಹ ಬುಡಕಟ್ಟು ಸಮುದಾಯಗಳನ್ನು ಕಳ್ಳರೆಂದು ಹಣೆಪಟ್ಟಿ ಹಚ್ಚುವುದು ಎಷ್ಟು ಸರಿ. ಅಪರಾಧಿ ಬುಡಕಟ್ಟುಗಳು ಎಂದು

ಹಣೆಪಟ್ಟಿ ಹಚ್ಚಿಕೊಂಡಿರುವ ಅಲೆಮಾರಿ ಸಮುದಾಯಗಳು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಮೇಲೇಳಲಾಗದ ಅತ್ಯಂತ ಹೀನಾಯ ಸ್ಥಿತಿಯಲ್ಲಿರುವುದು ದುರದುಷ್ಟಕರ.

### ವಿವಿಧ ರಾಜ್ಯಗಳಲ್ಲಿ ಅಪರಾಧಿ ಬುಡಕಟ್ಟುಗಳ ಪಟ್ಟಿಯಲ್ಲಿ ಕೊರಮ ಸಮುದಾಯ

**BUDHAN:** The Denotified and Nomadic Tribes Rights Action Group Newsletter

NOTE ON DENOTIFIED TRIBES (DNTS) Ministry of Welfare SCD Division

**List of DNT in HYDERABAD**

1 DONGA YERUKANS/KORACHAS/KORAVAS:C.T.in Hyderabad
2 KAIKADIS: C.T in Hyderbad
3 TALEGA PAMULAS or PEDDATY-GOLLAS or THELLA PAMAWADS; C.T.in Hyderbad Under The name "THELLA PAMAWADS-YEAR GOLLAS, PEDDITI GOLLAS, PARIKINO KKAAS & GURU DASARUS.

**MADRAS PRESDENCY**

1 KORACHAS almost all over Madras state Under ditterebt local names:Koracha; korava; Erukala; koravar S.C. in Mysore State,
2 Modigas:C.T in the Kurnool District
3 TALEGA PAMULAS or PEDDATY-GOLLAS or THELLA PAMAWADS;Talega Pamulas or Peddati gollas C.T. in Madras. Also Known as Yerra Gollas; Peddati Gollas, Parikinokkallas AND Guru Dasarics.
4 Kepumaris: Mainly in Karnool, Salem, Coimbutoor and South Arcot Districts.

**BOMBAY STATE**

1 Kaikadis:C.T. in Bombay State, also Hyderbad.

Mysore West Bengal, Bihar, Orissa, J & K, Saurahira Kutch.

18. Korachas and Koravas: CT in Mysore STaes uNder names also Erukula and Koravar, SC in Mysore State.
27. Talega Pamulas or Peddatti Gollas or Thella Pamawads: CT in Orissa.

### ಸೆಟ್ಲಮೆಂಟ ಅಧಿಕಾರಿಗಳು ಗುನ್ಹೆಗಾರ ಜಾತಿಗಳಿಗೆ ನೀಡುತ್ತಿದ್ದ ಸೌಲಭ್ಯಗಳು

೧. ಗುನ್ಹೆಗಾರ ಜಾತಿ ಮಕ್ಕಳ ಶಿಕ್ಷಣಕ್ಕಾಗಿ ಪ್ರತ್ಯೇಕ ಶಾಲೆಗಳನ್ನು ಸ್ಥಾಪಿಸಿ ಮಕ್ಕಳ ಶಿಕ್ಷಣ ಸುಧಾರಣೆಗೆ ಪ್ರಯತ್ನಿಸಿತು. ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡ ಲಾಗುತ್ತಿತ್ತು.

೨. ಯುವಕರಿಗೆ ವೃತ್ತಿಪರ ತರಬೇತಿಗಳನ್ನು ನೀಡಿ ಸ್ವಂತ ಉದ್ಯೋಗ ಮಾಡಲು ಅಣಿಗೊಳಿಸುತ್ತಿತ್ತು.

೩. ಗುನ್ಹೆಗಾರ ಸಮುದಾಯಗಳಿಗೆ ಸರ್ಕಾರಿ ನೌಕರಿಗಳನ್ನು ನೇರವಾಗಿ ನೀಡಲಾಗುತ್ತಿತ್ತು.

೪. ಆರೋಗ್ಯ ಕಾಯ್ದುಕೊಳ್ಳಲು ಪ್ರತ್ಯೇಕ ಆಸ್ಪತ್ರೆಗಳನ್ನು ಸ್ಥಾಪಿಸಿ ಔಷಧೋಪಚಾರವನ್ನು ಮಾಡುತ್ತಿದ್ದರು. ಸೆಟ್ಲಮೆಂಟಿ ವಸಾಹತು ಅಧಿಕಾರಿಗಳು ಸ್ವತಃ ಮನೆಗಳಿಗೆ ಸಂದರ್ಶನ ನೀಡಿ ಸ್ವಚ್ಛತೆಯ ಬಗೆಗೆ ವಿಚಾರಿಸುತ್ತಿದ್ದರು.

೫. ಸಾಂಸ್ಕೃತಿಕ ಚಟುವಟಿಕೆ, ಕಲೆಗಳಿಗೆ ಹೆಚ್ಚು ಮಹತ್ವವನ್ನು ಕೊಟ್ಟು ಕಲಾಕಾರರಿಗೆ ಪ್ರೋತ್ಸಾಹ ಕೊಡಲಾಗುತ್ತಿತ್ತು.

೬. ಒಳ್ಳೆಯ ಕ್ರೀಡಾಪಟುಗಳನ್ನು ಗುರುತಿಸಿ ಅವರಿಗೆ ತರಬೇತಿಯನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಕ್ರೀಡಾ ಕ್ಲಬ್‌ಗಳನ್ನು ಸ್ಥಾಪಿಸಿ ಈ ಜನರಿಗೆ ಉಚಿತವಾಗಿ ಕ್ರೀಡಾ ಸಾಮಗ್ರಿಗಳನ್ನು ಕೊಡುತ್ತಿದ್ದರು. ಪ್ರತಿಯೊಂದು ಸೆಟ್ಲಮೆಂಟಿನಲ್ಲಿ ಗುನ್ಹೆಗಾರ ಸಮುದಾಯದ ಕ್ರೀಡಾಪಟುಗಳಿಗೆ ಪ್ರತ್ಯೇಕ ಆಟದ ಬಯಲುಗಳು ಇದ್ದವು. ಈಗ ಆ ಕ್ರೀಡಾಕ್ಲಬ್‌ಗಳು ಬಂದಾಗಿದ್ದರೂ ಈ ಜನರು ತಮ್ಮ ಆಟದ ಗುರಿಯನ್ನು ಸಾಧಿಸುತ್ತಿದ್ದಾರೆ.

೭. ವಾಸಕ್ಕಾಗಿ ಮನೆಗಳನ್ನು ಉಚಿತವಾಗಿ ಕೊಡುತ್ತಿದ್ದರು.

೮. ಗುನ್ಹೆಗಾರ ಜನರಿಗೆ ಪ್ರತ್ಯೇಕ ಪಡಿತರ ಅಂಗಡಿಗಳು ಇದ್ದು ಅವರಿಗೆ ಬೇಕಾಗುವ ಆಹಾರ ವಸ್ತುಗಳನ್ನು ಪೂರೈಕೆ ಮಾಡುತ್ತಿದ್ದರು.

೯. ಮಹಿಳೆಯರಿಗೆ ವೃತ್ತಿಪರ ತರಬೇತಿಗಳನ್ನು ನೀಡುತ್ತಿದ್ದರು.

೧೦. ಬಾಲ ಮಂದಿರ ಮತ್ತು ವಸತಿನಿಯಲಗಳನ್ನು ಸ್ಥಾಪಿಸಿದ್ದರು.

# ೧೧

## ಸಮಸ್ಯೆ ಸಂಘಟನೆ ಪರಿಹಾರ

ಮೂಲದಲ್ಲಿ ಅಲೆಮಾರಿಗಳಾಗಿದ್ದ ಕೊರಮರು ಇಂದು ಒಂದೇ ಕಡೆ ನೆಲೆ ನಿಲ್ಲುತ್ತಿದ್ದಾರೆ. ಸಾಂಸ್ಕೃತಿಕವಾಗಿ ತುಂಬಾ ಶ್ರೀಮಂತವಾಗಿರುವ ಕೊರಮರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತುಂಬಾ ಹಿಂದುಳಿದಿದ್ದಾರೆ. ಕೊರಮರ ಸ್ಥಿತಿಗತಿಗಳನ್ನು ಅವಲೋಕಿಸುವುದರೊಂದಿಗೆ ಅವರ ಸಂಘಟನೆಯ ಸ್ವರೂಪ, ಮತ್ತು ಅವರ ಸಮಸ್ಯೆ ಗಳಿಗೆ ಏನೇನು ಪರಿಹಾರಗಳನ್ನು ಕಂಡುಕೊಳ್ಳಬಹುದು ಎಂಬುದನ್ನು ಇಲ್ಲಿ ಗಮನಿಸ ಲಾಗಿದೆ.

**ಸಮಾಜಿಕ ಸ್ಥಿತಿಗತಿ**

ಕೊರಮರು ಸಾಮಾಜಿಕವಾಗಿ ತುಂಬಾ ಹಿಂದುಳಿದವರು. ಅಸ್ಪೃಶ್ಯರಾದ ಕೊರಮರಿಗೆ ಇಂದು ಆ ಸಮಸ್ಯೆ ಹೆಚ್ಚು ಕಾಡುವುದಿಲ್ಲ ಎಂದು ಹೇಳುವರಾದರೂ ಭಜಂತ್ರಿ ಕೆಲಸಕ್ಕೆ ಹೋಗುವ ಕೊರಮರು ಅಸ್ಪೃಶ್ಯತೆಯ ಅನುಭವ ಇಂದಿನ ಆಧುನಿಕ ಯುಗದಲ್ಲೂ ತಮಗಾಗುತ್ತಿದೆ ಎಂದು ಹೇಳುತ್ತಾರೆ.

**ರಾಜಕೀಯ ಸ್ಥಿತಿಗತಿ**

ಕೊರಮರ ರಾಜಕೀಯ ಸ್ಥಿತಿ ಅಷ್ಟೇನು ತೃಪ್ತಿದಾಯಕವಾದುದಲ್ಲ. ಕೊರಮರಲ್ಲಿ ಎಂ ಎಲ್ ಎ ಆಗಿದ್ದವರು ಒಬ್ಬರು ಮಾತ್ರ, ಇತ್ತೀಚಿಗೆ ಜಿಲ್ಲಾ, ತಾಲೂಕು, ಗ್ರಾಮ ಪಂಚಾಯತಿ, ನಗರಸಭೆ, ಮುಂತಾದ ಕಡೆ ಕೆಲವರು ಸದಸ್ಯರಾಗಿ ಕಾರ್ಯ ನಿರ್ವಹಿಸಿರುವುದುಂಟು. ಇದು ರಾಜಕೀಯ ಅನುಭವಕ್ಕೆ ಸಾಧ್ಯವಾಗಿದೆ. ತಮಗಿಂತಲೂ ನಿಕೃಷ್ಟವಾಗಿರುವ ಸಮುದಾಯಗಳನ್ನು ನೋಡಿ ಇವರು ತಮಗೆ ಇಷ್ಟಾದರೂ ದೊರೆತಿದೆಯಲ್ಲ ಎಂದು ತೃಪ್ತಿ ಹೊಂದಬೇಕಷ್ಟೆ.

**ಕೋಷ್ಟಕ: ೧೧.೧ ಸಮೀಕ್ಷಿಸಲಾದ ಕೊರಮರ ಮತದಾನದ ಸೌಲಭ್ಯ**

| ವಿವರ | ಪುರುಷ | ಮಹಿಳೆ | ಒಟ್ಟು |
|---|---|---|---|
| ಮತದಾನ ಮಾಡಲು ಅರ್ಹರ ಗುಂಪು | ೧೨೪೦ | ೧೧೩೯ | ೨೩೭೮ |
| ಮತದಾರರ ಗುಂಪು | ೯೨೫ | ೯೦೯ | ೧೮೩೪ |
| ಮತದಾರ ಪಟ್ಟಿಗೆ ಸೇರದ ಗುಂಪು | ೩೧೫ | ೨೩೦ | ೫೪೪ |

ಕೊರಮರಲ್ಲಿ ಇಂದಿಗೂ ಮತದಾರರ ಪಟ್ಟಿಗೆ ಸೇರದ ಎಷ್ಟೋ ಜನ ಕಂಡು ಬರುತ್ತಾರೆ. ಸಮೀಕ್ಷೆ ಮಾಡಿದವರಲ್ಲಿ ಮತದಾರರ ಪಟ್ಟಿಯಲ್ಲಿರುವವರ ಪ್ರಮಾಣ ೭೭.೧೩ಇದೆ. ಮತದಾರರ ಪಟ್ಟಿಯಲ್ಲಿಲ್ಲದವರ ಪ್ರಮಾಣ ೨೨.೮೭ ರಷ್ಟಿದೆ.

**ಶೈಕ್ಷಣಿಕ ಸ್ಥಿತಿಗತಿ**

ಕೊರಮರು ಮೂಲತಃ ಅಲೆಮಾರಿಗಳು, ನಿತ್ಯದ ಬದುಕೇ ಮುಖ್ಯವಾಗಿರುವ ಇವರಿಗೆ ಶಿಕ್ಷಣ ಅಷ್ಟೇನೂ ಮಹತ್ವದ್ದಾಗಿ ಕಂಡುಬರುತ್ತಿಲ್ಲ.

ಇತ್ತೀಚಿನ ದಿನಗಳಲ್ಲಿ ಪ್ರಜ್ಞಾವಂತರಾಗಿರುವ ಕೊರಮರು ತಮ್ಮ ಮಕ್ಕಳನ್ನು ಶಾಲೆಗೆ ಕಳಿಸಲು ಹೆಚ್ಚು ಉತ್ಸಾಹ ತೋರುತ್ತಿರುವುದು ಆಶಾದಾಯಕ ವಿಚಾರವೆಂದೇ ಹೇಳಬಹುದು.ನಾವಾದರೂ ಕಲಿಯಲಿಲ್ಲ ನಮ್ಮ ಮಕ್ಕಳಾದರೂ ಕಲಿಯಲಿ ಎಂಬ ಭಾವನೆ ಇವರಲ್ಲಿ ಕಂಡುಬರುತ್ತಿದೆ. ಸಮೀಕ್ಷೆಗೆ ಒಳಪಟ್ಟವರಲ್ಲಿ ಸಾಕ್ಷರತೆಗೆ ಅರ್ಹ ವಾದವರು ೮೮.೬೧ರ ಪ್ರಮಾಣದಲ್ಲಿದ್ದಾರೆ. ಆದರೆ-ಸಾಕ್ಷರರ ಪ್ರಮಾಣ ೨೨.೦೧ರಷ್ಟು ಮಾತ್ರ ಕಂಡುಬರುತ್ತದೆ.

**ಕೋಷ್ಟಕ: ೧೧.೨ ಸಮೀಕ್ಷೆಗೊಳಪಟ್ಟ ಕೊರಮರ ಸಾಕ್ಷರತಾ ಪ್ರಮಾಣ**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಸಾಕ್ಷರತೆ ಹೊಂದಲು ಅರ್ಹವಾದವರು | ೧೯೯೫ | ೧೭೭೩ | ೩೭೬೮ |
| ಸಾಕ್ಷರತೆ ಹೊಂದಿದವರು | ೬೧೯ | ೩೨೦ | ೯೩೯ |
| ನಿರಕ್ಷರಿಗಳು | ೧೩೭೬ | ೧೪೫೩ | ೨೮೨೯ |

**ಶಿಕ್ಷಣದ ಸ್ಥಿತಿಗತಿ :** ಆದರೆ ಇತ್ತೀಚಿನ ದಶಕಗಳಲ್ಲಿ ಕೊರಮರು ಒಂದು ಕಡೆ ನೆಲೆನಿಲ್ಲುತ್ತಿದ್ದಾರೆ. ಇವರಲ್ಲಿಯೂ ಶಿಕ್ಷಣದ ಕುರಿತು ಅರಿವುಂಟಾಗುತ್ತಿದೆ. ಹೀಗಾಗಿ ೨೦೦೧ರ ಈಚೆಗೆ ವಿದ್ಯಾಭ್ಯಾಸದಲ್ಲಿ ತೊಡಗಿದವರ ಸಂಖ್ಯೆ ಈ ಸಮುದಾಯದಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಸಾಕ್ಷರತೆ ಹೊಂದಿದ ಕೊರಮರಲ್ಲಿ ಮೆಟ್ರಿಕ್ ಪೂರ್ವ ಶಿಕ್ಷಣ ಪಡೆದವರ ಪ್ರಮಾಣ ೯೧.೬೯ಇದೆ. ಆದರೆ ಮೆಟ್ರಿಕ್ ನಂತರದ ಶಿಕ್ಷಣ ಪಡೆದವರ ಪ್ರಮಾಣ ೮.೩೧ಮಾತ್ರ ಇದೆ. ಅಂದರೆ ಉನ್ನತ ಶಿಕ್ಷಣಕ್ಕೆ ಹೋದಂತೆಲ್ಲ ಕೊರಮರಲ್ಲಿ ಓದುವವರ ಪ್ರಮಾಣ ಕಡಿಮೆಯಾಗಿದೆ. ಮಾಧ್ಯಮಿಕ, ಪ್ರೌಢ ಶಿಕ್ಷಣ ಹೊಂದಿದವರಿಗಿಂತ ಪ್ರಾಥಮಿಕ ಶಿಕ್ಷಣ ಹೊಂದಿದ ಮಕ್ಕಳು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ನಾಲ್ಕು ಐದನೇ ತರಗತಿಗೆ ಬರುವಷ್ಟರಲ್ಲಿ ಮಕ್ಕಳನ್ನು ನಾನಾ ಕಾರಣಗಳಿಗಾಗಿ ಶಾಲೆ ಬಿಡಿಸುವುದರಿಂದ ಮುಂದಿನ ವಿದ್ಯಾಭ್ಯಾಸವನ್ನು ಮಕ್ಕಳು ಪೂರೈಸಲು ಸಾಧ್ಯವಾಗು ವುದಿಲ್ಲ.

ಕೋಷ್ಟಕ: ೧೧.೩ ಸಮೀಕ್ಷೆಗೊಳಪಟ್ಟ ಕೊರಮರ ಶೈಕ್ಷಣಿಕ ಸ್ಥಾನ ಮಾನ(೨೦೦೭)

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| | ಮೆಟ್ರಿಕ್‌ಪೂರ್ವ ಶಿಕ್ಷಣ | | | |
| ೦೧ | ಪ್ರಾಥಮಿಕ | ೨೮೩ | ೧೮೧ | ೪೬೪ |
| ೦೨ | ಮಾಧ್ಯಮಿಕ | ೧೧೦ | ೭೭ | ೧೮೭ |
| ೦೩ | ಪ್ರೌಢಶಾಲೆ | ೧೫೪ | ೫೬ | ೨೧೦ |
| | ಒಟ್ಟು | ೫೪೭ | ೩೧೪ | ೮೬೧ |
| | ಮೆಟ್ರಿಕ್ ನಂತರದ ಶಿಕ್ಷಣ | | | |
| | ಪಿಯುಸಿ | ೪೯ | ೦೫ | ೫೪ |
| | ಪದವಿ | ೧೬ | ೧ | ೧೭ |
| | ಸ್ನಾತಕೋತ್ತರ | ೦೨ | | ೦೨ |
| | ಇತರೆ | ೫ | | ೫ |
| | ಒಟ್ಟು | ೭೨ | ೦೬ | ೭೮ |

**ವಿಧವಾವೇತನ ಸೌಲಭ್ಯ**

ವಿಧುರರು ೧೯ ಮತ್ತು ವಿಧವರೆಯರು ೧೪೭ ಜನರಿದ್ದಾರೆ. ಆದರೆ ಕೇವಲ ೨೪ ಜನ ವಿಧವೆಯರು ಮಾತ್ರ ವಿಧವಾವೇತನ ಪಡೆಯಲು ಸಾಧ್ಯವಾಗಿದೆ.

ಕೋಷ್ಟಕ: ೧೧.೪ ಸಮೀಕ್ಷೆಗೊಳಪಟ್ಟ ಕೊರಮರ ವಿಧವಾವೇತನ ಸೌಲಭ್ಯ

| ಸಂ. | ವಿವರ | ಸಂಖ್ಯೆ |
|---|---|---|
| ೦೧ | ವಿಧವೆಯರು | ೧೪೭ |
| ೦೨ | ವಿಧವಾ ವೇತನ ಪಡೆಯುವರು | ೨೪ |

ಅನಕ್ಷರಸ್ಥ ಮಹಿಳೆಯರಿಗೆ ತಿಳುವಳಿಕೆಯ ಕೊರತೆಯಿಂದಾಗಿ ವಿಧವಾ ವೇತನ ಪಡೆಯಲು ಸೋತಿದ್ದಾರೆ.

**ವೃದ್ಧಾಪ್ಯವೇತನ**

೬೦ ಹಾಗೂ ಅದಕ್ಕಿಂತಲೂ ಮೇಲ್ಪಟ್ಟ ವಯೋಮಾನದ ಹಿರಿಯರಿಗೆ ವೃದ್ಧಾಪ್ಯ ವೇತನವನ್ನು ಸರ್ಕಾರ ನೀಡುತ್ತದೆ. ೬೦ ವರ್ಷಕ್ಕಿಂತ ಮೇಲ್ಪಟ್ಟು ವೃದ್ಧರಲ್ಲಿ ಪುರುಷರು ೭೨ ಹಾಗೂ ಮಹಿಳೆಯರು ೮೨ ಒಟ್ಟು ೧೫೪ ಜನರಿದ್ದಾರೆ. ಆದರೆ ವೃದ್ಧಾಪ್ಯ ವೇತನ ಪಡೆಯುತ್ತಿರುವವರಲ್ಲಿ ೮ ಜನ ಪುರುಷರು ೧೦ ಜನ ಮಹಿಳೆಯರು ಮಾತ್ರ ವೃದ್ಧಾಪ್ಯವೇತನ ಪಡೆಯುತ್ತಿದ್ದಾರೆ. ಅಜ್ಞಾನ ಹಾಗೂ ಬಡತನದಲ್ಲಿರುವ ನಿರ್ಗತಿಕ ವೃದ್ಧರಿಗೆಂದು ನಿಗದಿ ಮಾಡಿದ ಈ ಸೌಲಭ್ಯ ಪಡೆಯುವಲ್ಲಿಯೂ ಕೊರಮರು ವಂಚಿತರಾಗಿರುವುದು ಕಂಡುಬರುತ್ತದೆ.

ಕೋಷ್ಟಕ: ೧೧.೫ ಸಮೀಕ್ಷೆಗೊಳಪಟ್ಟ ಕೊರಮರ ವೃದ್ಧಾಪ್ಯವೇತನದ ವಿವರ

| ಸಂ | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ೬೦ಕ್ಕಿಂತ ಮೇಲ್ಪಟ್ಟ ವಯೋಮಾನದವರು | ೭೨ | ೮೨ | ೧೫೪ |
| ೦೨ | ವೃದ್ಧಾಪ್ಯವೇತನ ಪಡೆಯುತ್ತಿರುವವರು | ೦೮ | ೧೦ | ೧೮ |

**ವಿಕಲಾಂಗತೆ**

ಕೊರಮರಲ್ಲಿ ವಿಕಲಾಂಗತೆ ತುಂಬಾ ಕಡಿಮೆ, ನೈಸರ್ಗಿಕವಾದ ಜೀವನ ಶೈಲಿ ಇವರನ್ನು ಸದೃಢರನ್ನಾಗಿ ಮಾಡಿದೆ. ಆದರೂ ಅಲ್ಲೊಬ್ಬ ಇಲ್ಲೊಬ್ಬರಂತೆ ವಿಕಲಾಂಗರು ಕಂಡುಬರುತ್ತಾರೆ. ಸಮೀಕ್ಷೆಗೊಳಪಟ್ಟ ಕೊರಮರಲ್ಲಿ ಇಬ್ಬರು ಕುರುಡರು, ಐದು ಜನ ಮನೋವಿಕಲತೆಗೆ ಒಳಗಾದವರು, ೧೬ ಜನ ದೈಹಿಕ ನ್ಯೂನ್ಯತೆಗಳನ್ನು ಹೊಂದಿದವರು ಕಂಡುಬರುತ್ತಾರೆ.

ಕೋಷ್ಟಕ: ೧೧.೬ ಸಮೀಕ್ಷೆಗೊಳಪಟ್ಟ ಕೊರಮರ ವಿಕಲಾಂಗರ ವಿವರ

| ಸಂ. | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೦೧ | ಕುರುಡರು | ೦೧ | ೦೧ | ೦೨ |
| ೦೨ | ಮನೋವಿಕಲತೆ | ೦೨ | ೦೩ | ೦೫ |
| ೦೩ | ದೈಹಿಕ ನ್ಯೂನ್ಯತೆ | ೧೦ | ೦೬ | ೧೬ |
| | ಒಟ್ಟು | ೧೩ | ೧೦ | ೨೩ |
| ೦೪ | ಅಂಗವಿಕಲರ ವೇತನ ಪಡೆಯುತ್ತಿರುವವರು | ೦೮ | ೦೬ | ೧೪ |

ಒಟ್ಟು ವಿಕಲಾಂಗರಲ್ಲಿ ಕೇವಲ ೧೪ ಜನಕ್ಕೆ ಮಾತ್ರ ಅಂಗವಿಕಲರ ವೇತನ ದೊರೆಯುತ್ತಿದೆ. ಅಂದರೆ ಶೇ. ೬೦.೮೬ ರಷ್ಟು ಜನಗಳಿಗೆ ಮಾತ್ರ ಅಂಗಲಿಕಲರ ವೇತನ ಸೌಲಭ್ಯ ಪಡೆಯುತ್ತಿದ್ದಾರೆ. ಆದರೆ ಶೇ. ೩೯.೧೪ರಷ್ಟು ವಿಕಲಾಂಗರು ಅಂಗವಿಕಲ ವೇತನ ಸೌಲಭ್ಯದಿಂದ ವಂಚಿತರಾಗಿದ್ದಾರೆ.

**ಧಾರ್ಮಿಕ ಸ್ಥಿತಿಗತಿ**

ಕೊರಮರು ಯಾವುದೇ ಧರ್ಮಕ್ಕೆ ಸೇರದ ಬುಡಕಟ್ಟು ಮೂಲದವರು. ಆದರೆ ಇವರನ್ನು ಹಿಂದೂಗಳೆಂದು ಗುರುತಿಸಲಾಗುತ್ತದೆ. ಇವರನ್ನು ಸಾಮಾಜಿಕವಾಗಿ ತುಂಬಾ ಕೀಳಾಗಿ ಕಂಡುದರ ಪರಿಣಾಮವಾಗಿ ಕೆಲವು ಜನ ಅನ್ಯ ಧರ್ಮಗಳಿಗೆ ಮೊರೆ ಹೋದ ಉದಾಹರಣೆಗಳುಂಟು. ಕೊರಮರು ಸಿಖ್, ಬೌದ್ಧ, ಕ್ರಿಶ್ಚಿಯನ್ ಮುಂತಾದ ಧರ್ಮಗಳಿಗೆ ಮತಾಂತರಗೊಂಡಿದ್ದಾರೆ. ಅಂಥವರ ವಿವರ ಈ ಕೆಳಗಿನಂತಿದೆ. (ಕೋಷ್ಟಕ)

**ಕೋಷ್ಟಕ: ೧೧.೭ ವಿವಿಧ ಧರ್ಮಗಳಲ್ಲಿ ಕೊರಮರು (೨೦೦೧)**

| ಧರ್ಮಗಳು | ಗ್ರಾಮೀಣ | | | ನಗರ | | |
|---|---|---|---|---|---|---|
| | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| **ಕೊರಚ** | | | | | | |
| ಹಿಂದೂ | ೩೫,೭೫೯ | ೧೭,೯೯೨ | ೧೭,೭೬೭ | ೧೩,೪೨೪ | ೬,೯೦೧ | ೬,೫೨೩ |
| ಸಿಖ್ಖ್ | ೦ | ೦ | ೦ | ೧ | ೦ | ೧ |
| ಬೌಧ | ೦ | ೦ | ೦ | ೦ | ೦ | ೦ |
| **ಕೊರಮ** | | | | | | |
| ಹಿಂದೂ | ೭೭,೩೪೬ | ೩೯,೨೯೧ | ೩೮,೦೫೫ | ೩೭,೬೧೯ | ೧೮,೯೧೪ | ೧೮,೭೦೫ |
| ಸಿಖ್ಖ್ | ೫ | ೪ | ೧ | ೧೭ | ೯ | ೮ |
| ಬೌಧ | ೭೪ | ೩೫ | ೩೯ | ೪೯ | ೨೬ | ೨೩ |
| ಕುರುವನ್ | | | | | | |
| ಹಿಂದೂ | ೨೬೧ | ೧೩೬ | ೧೨೫ | ೪೧೨ | ೨೦೬ | ೨೦೬ |
| ಸಿಖ್ಖ್ | ೦ | ೦ | ೦ | ೦ | ೦ | ೦ |
| ಬೌಧ | ೦ | ೦ | ೦ | ೦ | ೦ | ೦ |

ಸಂಘಟನೆ

ಕೊರಮರ ಸಾಮಾಜಿಕ ಮತ್ತು ಆಂತರಿಕ ಸ್ಥಿತಿಗಳನ್ನು ಅಭಿವೃದ್ಧಿಗೊಸಲು, ಜನರಲ್ಲಿ ಸೌಹಾರ್ಧಯುತ ಬಾಂಧವ್ಯವನ್ನು ಕಲ್ಪಿಸಲೂ ಕೊರಮ ಸಮುದಾಯದಲ್ಲಿನ ಒಳಪಂಗಡಗಳನ್ನು ಒಂದು ವೇದಿಕೆಯಡಿಯಲ್ಲಿ ತರಲು ೧೯೩೮ನೆ ಇಸವಿಯಲ್ಲಿ ಪ್ರಪ್ರಥಮಬಾರಿಗೆ ಕೊರಮ ಸಂಘವನ್ನು ಸ್ಥಾಪಿಸಲಾಯಿತು. ಆದರೆ ಸ್ವಲ್ಪ ದಿನಗಳ ನಂತರ ಕಾರಣಾಂತರದಿಂದ ಸಂಘದ ಚಟುವಟಿಕೆಗಳು ನಿಂತು ಹೋದವು. ಕಾಲಾಂತರದಲ್ಲಿ ಕೊರಮ ಸಮುದಾಯದ ಕೆಲವು ಮುಖಂಡರುಗಳು ಈ ಸಂಘವನ್ನು ಹೇಗಾದರೂ ಮಾಡಿ ಪುನರುಜ್ಜೀವನ ಮಾಡಬೇಕೆಂಬ ಉದ್ದೇಶದಿಂದ ಕೊರಮರ ಎಲ್ಲಾ ಪಂಗಡಗಳಿಗೆ ಅನ್ವಯಿಸುವಂತೆ ೧೮.೦೧.೧೯೭೬ರಲ್ಲಿ ಟಿ.ಮುನಿರಾಮಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಮಾಡಿ ಸಂಘದ ಕಾರ್ಯಚಟುವಟಿಕೆಗಳ ಬಗ್ಗೆ ತೀರ್ಮಾನಿಸಲಾಯಿತು. ಇದೆ ಸಂದರ್ಭದಲ್ಲಿ ೭ ಜನರ ತಾತ್ಕಾಲಿಕ ಸಮಿತಿಯನ್ನು ನೇಮಕ ಮಾಡಲಾಯಿತು.

೧. ಟಿ. ಮುನಿರಾಮಯ್ಯ ೨. ಎ.ಎಂ. ಶ್ಯಾಮಪ್ರಸಾದ್ ೩. ಕೆ. ವೆಂಕಟಸ್ವಾಮಿ ೪. ಬಿ. ಚಂದ್ರಯ್ಯ ೫. ಬಿ.ಎಂ. ಗೋಪಾಲ ೬. ಅಬ್ಬಯ್ಯ ಉರುಫ್ ಕೃಷ್ಣಮೂರ್ತಿ ೭. ನಂಜಪ್ಪನವರುಗಳನ್ನು ನೇಮಿಸಲಾಯಿತು. ತರುವಾಯ ಅಖಿಲ ಕರ್ನಾಟಕ ಕೊರಮ

ರೆಲ್ಲರಿಗೂ ಅನ್ವಯಿಸುವಂತೆ ಒಂದು ಹೊಸ ಸಂಘವನ್ನು ನೋಂದಣಿ ಮಾಡಿಸಲಾಯಿತು. (ನಂ. ೨೩೭, ೭೬-೭೭ ತಾರೀಖು ೧೪.೧೦.೧೯೭೬) ಶ್ರೀ ಎ.ಎಸ್. ಕೃಷ್ಣ ಐಯ್ಯರ್‌ರವರ ಅಧ್ಯಕ್ಷತೆಯಲ್ಲಿ ೧೮ ಜನರ ಸಮಿತಿ ಸದಸ್ಯರನ್ನಾಗಿ ಆಯ್ಕೆ ಮಾಡಿ ಈ ಕೆಳಕಂಡ ತೀರ್ಮಾನಗಳನ್ನು ಮಾಡಲಾಯಿತು. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಯಿಸಿಕೊಳ್ಳುವ ಎಲ್ಲರನ್ನು ಒಳಗೊಂಡು. ಅಂದರೆ ಕೊರಮ, ಕೊರಚ, ಕುಂಚಿಕೊರವ, ಕೊರವರ್, ಕೈಕಾಡಿ, ಎರಕುಲ, ಬಜೇಂತ್ರಿ, ವಾಜಂತ್ರಿ, ಕುರವನ್, ಕೇಪ್‌ಮಾರಿಸ್, ಇತ್ಯಾದಿ ಹೆಸರುಗಳಿಂದ ಗುರುತಿಸಿಕೊಂಡಿರುವವರು ಹಾಗೂ ಭಾಷೆ ಮತ್ತು ಬೆಡಗುಗಳು ಒಂದೇ ಆಗಿರುವವರೆಲ್ಲರೂ ಈ ಸಂಘದ ಸದಸ್ಯರಾಗಲು ಅರ್ಹರಾಗುತ್ತಾರೆಂದು ತೀರ್ಮಾನಿಸಲಾಯಿತು. ೧೯೭೬ರಲ್ಲಿ ಮೈಸೂರು ರಾಜ್ಯದಲ್ಲಿ ಕೊರಮರ ಹೆಸರುಗಳು ಎಸ್.ಸಿ., ಎಸ್.ಟಿ. ಪಟ್ಟಿಗೆ ಸೇರದೆ ಬಿಟ್ಟು ಹೋಗಿದ್ದೂದ್ದರಿಂದ ಆ ಹೆಸರುಗಳು ಅಂದರೆ ಕುಂಚಿ ಕೊರವ, ಭಜಂತ್ರಿ, ಕೈಕಾಡಿ, ಯರಕುಲ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವವರನ್ನು ೧೯೭೬ರಲ್ಲಿ ಪಾರ್ಲಿಮೆಂಟಿನಲ್ಲಿ ಬಿಲ್ಲು ಬರುವ ಸಂದರ್ಭದಲ್ಲಿ ಕರ್ನಾಟಕದಿಂದ ಶ್ರೀ ಉತ್ತಲಾಸ್ಕರ ಅವರನ್ನು ಬೋವಿ, ಬಂಜಾರ ಸಂಘಗಳ ಜೊತೆ ಜಂಟಿಯಾಗಿ ಡೆಲ್ಲಿಗೆ ಕಳುಹಿಸಲಾಯಿತು. ಆ ಬಿಲ್ಲಿನಲ್ಲಿ ಎಸ್.ಸಿ., ಎಸ್.ಟಿ. ಪಟ್ಟಿಯಲ್ಲಿ ಬಿಟ್ಟು ಹೋಗಿರುವ ಹೆಸರುಗಳನ್ನು ಸೇರಿಸುವಂತೆ ಆಗ್ರಹಿಸಲಾಗಿತ್ತು. ಆದರೆ ಆ ಬಿಲ್ಲು ಮಾತ್ರ ಪೂರ್ತಿ ಪಾಸಾಗದೆ ನೀಡಿದ ನಿಬಂಧಗಳಲ್ಲಿ ಒಂದೆರಡು ಮಾತ್ರ ಆದವು. ೧೯೮೩ನೇ ಜುಲೈ ತಿಂಗಳು ೯ ಮತ್ತು ೧೦ನೇ ತಾರೀಖಿನಂದು ಬೆಂಗಳೂರಿನಲ್ಲಿ ಆಗಿನ ಮುಖ್ಯಮಂತ್ರಿಗಳಾದ ರಾಮಕೃಷ್ಣ ಹೆಗಡೆಯವರ ನೇತೃತ್ವದಲ್ಲಿ ಇಂಟಿಗ್ರೇಟೆಡ್ ಕಾನ್‌ಫರೆನ್ಸ್ ಮಾಡಲಾಯಿತು. ಈ ಸಮ್ಮೇಳನಕ್ಕೆ ತಮಿಳುನಾಡಿನಿಂದ ಶ್ರೀ ಮನವಶನ್, ಕೆ.ಎಂ.ರಾಮರತ್ನಂ, ಕೊಯಂಬತ್ತೂರಿಯಿಂದ ರಾಮದಾಸ್ ಎಂಬುವವರು, ಆಂಧ್ರ ಪ್ರದೇಶದಿಂದ ಶ್ರೀ ಪೊನ್ನಾ ಕೋಟೇಶ್ವರಾವು ಮತ್ತು ಪ್ರೋಚಯ್ಯ ಎಂಬುವರು, ಮಹಾರಾಷ್ಟ್ರದಿಂದ ಲಕ್ಷ್ಮಣಜಾದವ್ ಎಂಬುವವರು ಭಾಗವಹಿಸಿದ್ದರು. ಕೊರಮ ಸಮುದಾಯದವರು ಬೇರೆ ಬೇರೆ ರಾಜ್ಯಗಳಲ್ಲಿನ ಸಮುದಾಯದವರ ಜೊತೆ ಉತ್ತಮವಾದ ಸಂಬಂಧ ಹೊಂದಿದ್ದರು ಎಂಬುದಕ್ಕೆ ಈ ಸಮ್ಮೇಳನವೇ ಸಾಕ್ಷಿಯಾಗಿದೆ. ಈ ಸಮ್ಮೇಳನದಲ್ಲಿ ಸಮುದಾಯದ ಹೆಸರನ್ನು, ಕಾದಂಬರಿಗಳಲ್ಲಿಯೂ, ಚಲನ ಚಿತ್ರಗಳಲ್ಲಿಯೂ, ಸ್ಥಳೀಯ ಪತ್ರಿಕೆಗಳಲ್ಲಿಯೂ ಕಳ್ಳಕೊರಮ ಎಂಬ ಪದಗಳನ್ನೂ ಬಳಕೆಯಲ್ಲಿ ತರುತ್ತಿರುವುದನ್ನು ವಿರೋಧಿಸಲಾಯಿತು. ಇದರ ಜೊತೆಗೆ ಹಾವನೂರು ಕಮಿಷನ್‌ರವರು ಕೊರಮಶೆಟ್ಟಿಯವರನ್ನು ಎಸ್.ಸಿ ಪಟ್ಟಿಯಿಂದ ತೆಗೆದು ಹಾಕಿ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಿದರು. ಹೀಗಾಗಿ ಈ ಸಮುದಾಯಗಳಿಗೆ ಪರಿಶಿಷ್ಟ ಜಾತಿಗೆ ಸಿಗುವ ಸೌಲಭ್ಯದಿಂದ ವಂಚಿತರನ್ನಾಗಿ ಮಾಡಿದರು. ಇದನ್ನು

ವಿರೋಧಿಸಿ ಕೊರಮ, ಕೊರಮಶೆಟ್ಟಿ ಬೇರೆ ಬೇರೆಯಲ್ಲ ಎಂದು ಸರ್ಕಾರಕ್ಕೆ ಮನದಟ್ಟು ಮಾಡಲು ತೀರ್ಮಾನಿಸಲಾಯಿತು. ಕೊರಮರಲ್ಲಿರುವ ಎಲ್ಲಾ ಒಳ ಪಂಗಡಗಳನ್ನು ಒಂದುಗೂಡಿಸಬೇಕು. ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಅಭಿವೃದ್ಧಿ ಪಡಿಸಬೇಕು ಎನ್ನುವ ದೃಷ್ಟಿಯಿಂದ ಸಂಘವು ಅಸ್ತಿತ್ವಕ್ಕೆ ಬಂದಿತು. ಸಂಘವು ಈ ನಿಟ್ಟಿನಲ್ಲಿ ಇನ್ನೂ ಕ್ರಿಯಾಶೀಲವಾಗಬೇಕಾಗಿದೆ. ಎಲ್ಲಾ ಜಿಲ್ಲೆಗಳಲ್ಲಿ, ತಾಲೂಕುಗಳಲ್ಲಿ ಸಂಘವು ಕಾರ್ಯಚಟುವಟಿಕೆ ವಿಸ್ತರಿಸಿಕೊಳ್ಳಬೇಕಿದೆ. ಇತ್ತೀಚಿಗೆ ಈ ಸಮುದಾಯದ ಉತ್ಸಾಹಿ ಯುವಕರು ಇತರೆ ಸಮುದಾಯಗಳ ಸಂಘಟನೆಯ ಪ್ರಭಾವಕ್ಕೆ ಒಳಗಾಗಿ ಕೊರಮ ಸಂಘ ಕ್ರಿಯಾಶೀಲವಾಗಿರಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದಾರೆ. ಯುವಜನಾಂಗಕ್ಕೆ ಆಳುವ ವರ್ಗದಿಂದ, ಹಿರಿಯರಿಂದ ಇನ್ನೂ ಹೆಚ್ಚಿನ ಪ್ರೋತ್ಸಾಹ ಸಿಕ್ಕಲ್ಲಿ ರಾಜ್ಯದದ್ಯಾಂತ ಸಂಘಟನೆಯನ್ನು ಕಟ್ಟಲು ಉತ್ಸಾಹಿ ಯುವಕರಿದ್ದಾರೆ.

ಪರಿಹಾರೋಪಾಯಗಳು

* ಕೊರಮರು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಹಾಯಕವಾಗುವಂತೆ ಕರಕುಶಲ ತರಬೇತಿಯನ್ನು ನೀಡಬೇಕು.
* ಕಾಡಿನ ಪ್ರಮಾಣ ಕಡಿಮೆಯಾಗುತ್ತಿರುವುದರಿಂದ ಕೊರಮರ ಕಸುಬಿಗೆ ಬೇಕಾದ ಹುಲ್ಲು, ಈಚಲು ಬರಲು ದೊರೆಯುವುದೇ ಕಷ್ಟವಾಗಿದೆ. ಹೀಗಾಗಿ ಇವರ ಕಸುಬಿಗೆ ತೊಂದರೆಂತಾಗದಂತೆ ಪರ್ಯಾಯ ಮಾರ್ಗಗಳನ್ನು ತೋರಿಸುವಂತಾಗಬೇಕು.
* ತಮ್ಮ ಮೂಲ ಭಾಷೆಯಾದ ಕುಳಿರ್\ಕುಳುವ ಭಾಷೆಯನ್ನು ಇಂದು ಕೊರಮರ ಯುವಜನಾಂಗ ಮರೆಯುತ್ತಿದೆ. ತಮಿಳಿನ ಮೂಲ ಭಾಷೆಯಾದ ಈ ಭಾಷೆಯನ್ನು ಕಾಪಾಡುವ ಕೆಲಸವನ್ನು ಮಾಡಬೇಕಾಗಿದೆ.
* ಇಂದಿಗೂ ಕೊರಮ ಮಕ್ಕಳು ಶಾಲೆಗೆ ಹೋಗುವುದು ಅಪರೂಪ. ಇಂತಹ ಮಕ್ಕಳಿಗಾಗಿ ವಿಶೇಷ ಸವಲತ್ತನ್ನೊದಗಿಸಬೇಕು.
* ಗುಡಿಸಲು, ಗುಡಾರಗಳಲ್ಲಿ ಬದುಕುತ್ತಿರುವ ಕೊರಮರಿಗೆ ಸರ್ಕಾರ ಮನೆಗಳ ಸೌಲಭ್ಯ ಕಲ್ಪಿಸಿಕೊಡಬೇಕು.
* ಕೊರಮರ ಅಭಿವೃದ್ಧಿಗಾಗಿ ವಿಶೇಷ ಪ್ಯಾಕೇಜುಗಳನ್ನು ಮಾಡಬೇಕು.
* ಕೊರಮ ಯುವಕರಿಗೆ ಸ್ವಯಂ ಉದ್ಯೋಗವನ್ನು ಸೃಷ್ಟಿಸುವುದು.
* ಕೊರಮರು ನಾನಾ ಹೆಸರುಗಳಿಂದ(ಕೊರಮ, ಕೊರ್ಚ, ಕೊರಚ, ಯರಕುಲ, ಕೇಪ್‌ಮಾರಿಸ್, ಕೊರವ ಇತ್ಯಾದಿ) ಹರಿದು ಹಂಚಿಹೋಗಿದ್ದಾರೆ. ಅವರೆಲ್ಲರಿಗೂ ಸಮಾನ ಅವಕಾಶಗಳು ಸಿಗುವಂತೆ ಒಂದೇ ಮೀಸಲಾತಿಯಡಿ ಸೌಲಭ್ಯಗಳು ಸಿಗುವಂತಾಗಬೇಕು.
* ಸಾಮಾಜಿಕ ನ್ಯಾಯ ವೇದಿಕೆಯನ್ನು ರಚಿಸುವುದು

